ನವಸಾಕ್ಷರ ಪುಸ್ತಕ ಮಾಲೆ ೮೨

# ಮಕ್ಕಳ ಮನಸ್ಸು

ಡಾ॥ ಕೆ. ಎ. ಅಶೋಕ ಪೈ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ-೮೭

# ಮಕ್ಕಳ ಮನಸ್ಸು

ಡಾ॥ ಅಶೋಕ ಪೈ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೧೧

**MAKKALA MANASSU** : By Dr. A. ASHOK PAI. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. ii + 26, Rs. 8.00

---



ಸಂಯೋಜನಾಧಿಕಾರಿ
ಡಾ|| ಎಚ್. ಎಸ್. ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

ಮುಖಪುಟ ವಿನ್ಯಾಸ
ಕೆ. ಮಕಾಳಿ

ಬೆಲೆ : ರೂ ೮.೦೦

ಮುದ್ರಕರು
ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್
೩/೩, ಮೊದಲನೆ ಮುಖ್ಯರಸ್ತೆ,
ಹೊಸ ತರಗುಪೇಟೆ,
ಬೆಂಗಳೂರು ೫೬೦ ೦೦೨



# ಮಕ್ಕಳ ಮನಸ್ಸು

**ಮನಸ್ಸು ಎನ್ನುವುದು ಏನು?**

ಮನಸ್ಸು ಎನ್ನುವುದು ಎಲ್ಲಿದೆ ? ಈ ಪ್ರಶ್ನೆಗೆ ಉತ್ತರ ಕಷ್ಟ. ಆದರೂ ಅದು ಇದೆ. ಏಕೆಂದರೆ ಇದು ಎಲ್ಲರ ಅನುಭವದ ಸಂಗತಿ.

ಕಣ್ಣಿಗೆ ಕಾಣದ ಈ ಮನಸ್ಸನ್ನು ಅರಿತು ತಿಳಿಯುವುದು ಹೇಗೆ? ತೀರಾ ಕಷ್ಟ. ಆದರೂ ವಿವಿಧ ಸಂದರ್ಭಗಳಲ್ಲಿ ವ್ಯಕ್ತಿಗಳು ಹೇಗೆ ನಡೆದುಕೊಳ್ಳುತ್ತಾರೆ, ಎಂತಹ ಮಾತುಕತೆಯಾಡುತ್ತಾರೆ ಎಂಬಂತಹ ಹಲವು ಸಂಗತಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಆ ವ್ಯಕ್ತಿಗಳ ಮನಸ್ಸು ಹೇಗಿರಬಹುದು ಎಂದು ಊಹಿಸಬಹುದು. ಆದರೆ ಇದಕ್ಕಾಗಿ ವಿಶೇಷ ಅಧ್ಯಯನ ಮಾಡಬೇಕು. ಇಂತಹ ಅಧ್ಯಯನವನ್ನು " ಮನೋವಿಜ್ಞಾನ " ಎನ್ನುತ್ತಾರೆ. ಹೀಗೆ ಅಧ್ಯಯನ ಮಾಡುವವರನ್ನು 'ಮನೋವಿಜ್ಞಾನಿ' ಎನ್ನುತ್ತಾರೆ.

ದೇಹದ ಆರೋಗ್ಯ ಎಷ್ಟು ಮುಖ್ಯವೋ ಮನಸ್ಸಿನ ಆರೋಗ್ಯವೂ ಅಷ್ಟೇ ಮುಖ್ಯ. ದೇಹದ ಆರೋಗ್ಯ ಕೆಟ್ಟಾಗ ವೈದ್ಯರ ಬಳಿಗೆ ಹೋಗುತ್ತೇವೆ. ಔಷಧಿ ತೆಗೆದುಕೊಳ್ಳುತ್ತೇವೆ. ಆರೋಗ್ಯದ ರಕ್ಷಣೆಗೆ ಆಹಾರ, ವ್ಯಾಯಾಮ ಮುಂತಾದವುಗಳಲ್ಲಿ ಕ್ರಮ ಅನುಸರಿಸುತ್ತೇವೆ.

ಆದರೆ ಮನಸ್ಸಿನ ಆರೋಗ್ಯವನ್ನು ಕಾಪಾಡುವುದು ಅಷ್ಟು ಸುಲಭವಲ್ಲ. ಏಕೆಂದರೆ, ಮನಸ್ಸು ಆರೋಗ್ಯವಾಗಿದೆಯೇ ಇಲ್ಲವೇ ಎಂಬ ಸಂಗತಿ ಸಹ ಎಷ್ಟೋ ವೇಳೆ ಸರಿಯಾಗಿ ತಿಳಿಯುವುದಿಲ್ಲ. ನಮ್ಮ ಬದುಕಿನ ಎಷ್ಟೋ ತೊಂದರೆಗಳಿಗೆ ಮನಸ್ಸಿನ ಅನಾರೋಗ್ಯವು ಕಾರಣವಿರಬಹುದು. ಸಮಸ್ಯೆಯ ಮೂಲ ಮನಸ್ಸಿನಲ್ಲಿ ಇದ್ದು ಚಿಕಿತ್ಸೆ ದೇಹಕ್ಕೆ ದೊರೆತರೆ ಫಲವೇನು?

ಹಾಗಾದರೆ ಇದನ್ನು ಸರಿಯಾಗಿ ಗುರುತಿಸುವುದು ಹೇಗೆ? ಸಮಸ್ಯೆಗಳಿದ್ದರೆ ಅವುಗಳನ್ನು ಗುರುತಿಸಬೇಕು. ಪರಿಹರಿಸಬೇಕು. ಎಲ್ಲದಕ್ಕೂ ಮೊದಲು ಮನಸ್ಸು ಎಂದರೆ ಏನು ಎಂಬುದನ್ನು ತಿಳಿಯಬೇಕು? ಇದನ್ನೆಲ್ಲಾ ಮನೋವಿಜ್ಞಾನಿಗಳು ಅಧ್ಯಯನ ಮಾಡುತ್ತಾರೆ.

ದೊಡ್ಡವರ ಮಾತಿರಲಿ. ಹುಟ್ಟಿದ ಮಗುವಿನ ಮನಸ್ಸನ್ನು ಸಹ ಮನೋವಿಜ್ಞಾನಿಗಳು ತಿಳಿಯಲು ಯತ್ನಿಸಿದ್ದಾರೆ. ಇದರಿಂದ ಮಕ್ಕಳನ್ನು ಬೆಳೆಸುವಾಗ ತಂದೆತಾಯಿಯರು ಎದುರಿಸುವ ಎಷ್ಟೋ ಸಮಸ್ಯೆಗಳು ಸುಲಭವಾಗಿ ಪರಿಹಾರವಾಗಲು ಸಾಧ್ಯ. ಎಷ್ಟೋ ವೇಳೆ ನಮ್ಮ ಮಕ್ಕಳನ್ನು ಚೆನ್ನಾಗಿ ಬೆಳೆಸುತ್ತಿದ್ದೇವೆ ಎಂದುಕೊಂಡಿರುತ್ತೇವೆ. ನಮಗೆ ತಿಳಿಯದೆ ತಪ್ಪು ಮಾಡುತ್ತಿರುತ್ತೇವೆ. ನಮ್ಮ ಮಕ್ಕಳಿಗೆ ನಾವೇ ಶತ್ರುಗಳಾಗಿ ಬಿಡುತ್ತೇವೆ. ಆದ್ದರಿಂದ ಮಕ್ಕಳ ಮನಸ್ಸು ಹೇಗಿರುತ್ತದೆ, ಅವರ ವಿವಿಧ ವರ್ತನೆಗಳಿಗೆ ಕಾರಣಗಳೇನು, ಎಂಬಂತಹ ಸಂಗತಿಗಳನ್ನು ಹಿರಿಯರು ತಿಳಿದಿರಬೇಕು. ಇದರಿಂದ ನಮ್ಮ ಮಕ್ಕಳು ನಮ್ಮೊಂದಿಗೆ ಸುಮಧುರ ಸಂಬಂಧವನ್ನು ಬೆಳೆಸಿಕೊಳ್ಳುವುದು ಸಾಧ್ಯವಾಗುತ್ತದೆ. ತಪ್ಪು ತಿಳಿವಳಿಕೆಯಿಂದ ಬರುವ ಸಂಬಂಧದ ಎಷ್ಟೋ ಬಿರುಕುಗಳನ್ನು ಸರಿಪಡಿಸಿ ನಾವು ಸಹ ನೆಮ್ಮದಿಯನ್ನು ಪಡೆಯುತ್ತೇವೆ.

ಮನೋವಿಜ್ಞಾನಿಗಳು ಹಲವು ಅಧ್ಯಯನಗಳನ್ನು ನಡೆಸಿ ಮಕ್ಕಳ ಮನಸ್ಸನ್ನು ಕುರಿತು ಎಷ್ಟೋ ಸಂಗತಿಗಳನ್ನು ಹೇಳಿದ್ದಾರೆ. ನಮಗಾಗಿ, ನಮ್ಮ ಮಕ್ಕಳಿಗಾಗಿ ಹಿರಿಯರಾದ ನಾವು ಇದನ್ನು ತಿಳಿಯೋಣ.

## ಮಗುವು ಹುಟ್ಟಿದಾಗ

ಹುಟ್ಟಿದೊಡನೆ ಮಗು ಈ ಜಗತ್ತಿನಲ್ಲಿ ತಾನು ಮಾತ್ರವೇ ಇರುವುದು ಎಂದುಕೊಳ್ಳುತ್ತದಂತೆ. ಆದರೆ, ನಿಧಾನವಾಗಿ ತನ್ನ ಅವಶ್ಯಕತೆಗಳ ಪೂರೈಕೆಯಲ್ಲಿ ತಾಯಿ ಇದ್ದಾಳೆಂದು ತಿಳಿಯುತ್ತದೆ. ತಾಯಿ ಹಾಲು ಕೊಡುತ್ತಾಳೆ. ಅವಳ ಸ್ಪರ್ಶದಿಂದಲೇ ಎಷ್ಟೋ

ನೆಮ್ಮದಿ ದೊರೆಯುತ್ತದೆ. ಮಗುವು ಈ ತಾಯಿಯನ್ನು ತಾನು ಪದೇ ಪದೇ ಸ್ಪರ್ಶಿಸುತ್ತಾ ಹೊಸ ಅನುಭವಕ್ಕೆ ಮನಸ್ಸನ್ನು ತೆರೆದುಕೊಳ್ಳುತ್ತದೆ. ತಾನು ಮಾತ್ರವೇ ಅಲ್ಲದೆ, ಇತರರು ತನ್ನ ಬದುಕಿನಲ್ಲಿ ಇರುವುದನ್ನು ಒಪ್ಪುತ್ತದೆ. ಇದೇ ಮುಂದೆ ಬೆಳೆದು ತಂದೆ ಹಾಗೂ ಸುತ್ತಮುತ್ತಲಿನ ಇತರರನ್ನು ತಿಳಿಯಲು ನೆರವಾಗುತ್ತದೆ.

## ಅಮ್ಮನ ಮಗ, ಅಪ್ಪನ ಮಗಳು

ಗಂಡು ಮಕ್ಕಳು ತಾಯಿಯನ್ನು, ಹೆಣ್ಣು ಮಕ್ಕಳು ತಂದೆಯನ್ನು ಹಚ್ಚಿಕೊಳ್ಳುತ್ತಾರೆಂಬುದನ್ನು ನಾವು ಸಾಮಾನ್ಯವಾಗಿ ನೋಡುತ್ತೇವೆ. ಹೀಗೇಕೆ ಎಂಬ ಪ್ರಶ್ನೆಗೆ ಮನೋವಿಜ್ಞಾನಿಗಳು ವಿಚಿತ್ರವಾದ ಒಂದು ವಿವರಣೆ ಕೊಟ್ಟಿದ್ದಾರೆ. ಇದು ಹೀಗೆಯೇ ಖಂಡಿತ ಎನ್ನುವುದು ಸಾಧ್ಯವಿಲ್ಲ. ಆದರೂ ಹೀಗೊಂದು ವಾದವಿದೆ. ಗಂಡುಮಗು ತಾಯಿಯನ್ನು, ಹೆಣ್ಣುಮಗು ತಂದೆಯನ್ನು ಇಷ್ಟಪಡಲು ಲೈಂಗಿಕ ಆಕರ್ಷಣೆಯೇ ಕಾರಣವಾಗಿರುತ್ತದೆ. ಆದರೆ ಈ ವಯಸ್ಸಿನ ಮಗು ಇದನ್ನು ಹೇಗೆ ಎದುರಿಸುತ್ತದೆ? ಮಗನು ತನ್ನ ತಂದೆಯಂತೆಯೇ ನಡೆದುಕೊಳ್ಳಲು ಆರಂಭಿಸುತ್ತಾನೆ. ತಾನು ತಂದೆಯ ಹಾಗೆ ಇದ್ದು ತಾಯಿಯನ್ನು ಆಕರ್ಷಿಸುವ ಆಸೆ ತೋರುತ್ತಾನೆ. ಹಾಗೆಯೇ ಮಗಳು ತನ್ನ ಅಮ್ಮನಂತೆಯೇ ನಡೆದುಕೊಳ್ಳುವ ಮೂಲಕ ತಂದೆಯನ್ನು ಆಕರ್ಷಿಸುವ ಆಸೆ ತೋರುತ್ತಾಳೆ.

ಯಾವುದೋ ಗ್ರೀಕ್ ನಾಟಕದಲ್ಲಿ ತಾಯಿಯನ್ನು ಮದುವೆಯಾದ ಈಡಿಪಸ್ ಎಂಬುವವನ ಕತೆ, ಹಾಗೂ ತಂದೆಯನ್ನು ಆಕರ್ಷಿಸಿದ ಎಲೆಕ್ಟ್ರಾ ಎಂಬುವವಳ ಕತೆಗಳಿವೆ. ಹಾಗಾಗಿ ಮಕ್ಕಳ ಈ ವರ್ತನೆಯನ್ನು ಈಡಿಪಸ್ ಗುಣ, ಎಲೆಕ್ಟ್ರಾ ಗುಣ ಎಂದು ವಿವರಿಸುತ್ತಾರೆ. ಮಕ್ಕಳು ಮನಸ್ಸಿನ ಬೆಳವಣಿಗೆಯ ಆರಂಭದ ಹಂತದಲ್ಲಿ ಇಂತಹ ಗುಣಗಳನ್ನು ತೋರಬಹುದು. ಇದು ಮಕ್ಕಳು ಅರಿವಿನಿಂದ ಕೂಡಿ ನಡೆದುಕೊಂಡದ್ದಲ್ಲ. ಅವರ ವರ್ತನೆಗೆ ದೊಡ್ಡವರು ಹಚ್ಚಿರುವ ಅರ್ಥಮಾತ್ರ. ಈ ಅರ್ಥ ನಿಜವೇ ಇದ್ದರೂ ಇದ್ದೀತು. ಆದರೆ ನಮಗೆ ಮುಖ್ಯವೆಂದರೆ ಮಕ್ಕಳು ಈ ಹಂತವನ್ನು ದಾಟಿ ಬಲುಬೇಗನೆ ಸಹಜ ಲೈಂಗಿಕ ಭಾವಗಳಿಗೆ ತಲುಪುತ್ತಾರೆ. ಹದಿವಯಸ್ಸಿಗೆ ಬರುತ್ತಾರೆ.

## ಮಗುವು ತನ್ನ ಅಂಗಾಂಗಳೊಡನೆ ಆಟವಾಡುತ್ತದೆ

ಮಕ್ಕಳ ಸಹಜ ಬೆಳವಣಿಗೆಯಲ್ಲಿ, ತನ್ನನ್ನು ತಾನು ಮುಟ್ಟಿನೋಡಿ ತಿಳಿಯುವ ಹಂತ ತೀರಾ ಮುಖ್ಯ. ತನ್ನನ್ನು ಕನ್ನಡಿಯಲ್ಲಿ ನೋಡಿಕೊಂಡು ಆನಂದಿಸುತ್ತದೆ. ತನ್ನ ಸುತ್ತಲಿನವರ ಅಂಗಾಂಗಗಳನ್ನು ಗಮನಿಸುತ್ತದೆ. ತನ್ನ ವಿವಿಧ ಅಂಗಗಳನ್ನು ಮುಟ್ಟಿನೋಡಿ ವ್ಯತ್ಯಾಸಗಳನ್ನು ತಿಳಿಯುತ್ತದೆ. ತನ್ನನ್ನು ತಾನು ತಿಳಿಯುವ ಆನಂದ ಇಲ್ಲಿ ತುಂಬಿರುತ್ತದೆ. ಜನನೇಂದ್ರಿಯಗಳನ್ನು



ಮುಟ್ಟಿನೋಡುತ್ತದೆ. ಆಟವಾಡುತ್ತದೆ. ಮಗುವಿಗೆ ಇದು ಸಹಜ ಅನುಭವ. ಹಿರಿಯರಿಗೆ ಮಾತ್ರ ಇಲ್ಲಿ ಅಶ್ಲೀಲತೆ, ಅಸಹ್ಯಗಳು ಕಾಣಬಹುದು. ತಮ್ಮ ಮನಸ್ಸಿನ ಕೆಟ್ಟ ಭಾವನೆಯನ್ನು ಮಕ್ಕಳ

ಮೇಲೆ ಆರೋಪಿಸುತ್ತಾರೆ. ಮಕ್ಕಳು ಅಂಗಗಳೊಂದಿಗೆ ಆಡುವುದನ್ನು ತಪ್ಪಿಸಲು ಯತ್ನಿಸುತ್ತಾರೆ. ಹಾಗೆ ಮಾಡುವುದು ಅಪರಾಧ ಎಂಬ ಭಾವವನ್ನು ತುಂಬುತ್ತಾರೆ. ಸಿಟ್ಟಿನಿಂದ ಬೈದು, ಹೊಡೆದು ಶಿಕ್ಷಿಸಲು ಸಹ ಮುಂದಾಗುತ್ತಾರೆ. ಈಗ ಮಾತ್ರ ಮಗುವು ಈ ಆಟವನ್ನು ಗುಪ್ತವಾಗಿ ಮಾತ್ರ ಆಡಬೇಕೆಂದು ಭಾವಿಸುತ್ತದೆ. ಅನವಶ್ಯಕವಾಗಿ ಭಯ, ಪಾಪಪ್ರಜ್ಞೆಗಳು ಬೆಳೆದು ಮಕ್ಕಳು ಈ ಹಂತದಲ್ಲಿ ಖಿನ್ನರಾಗುತ್ತಾರೆ. ತೀರಾ ಕಟ್ಟುನಿಟ್ಟಾಗಿ ಹಿರಿಯರು ಈ ಆಟಕ್ಕೆ ತಡೆಹಾಕಿದಾಗ, ಬೆಳೆಯುವ ಮಕ್ಕಳ ಮನಸ್ಸಿನಲ್ಲಿ ಒಂದು ರೀತಿಯ ಅಭದ್ರಭಾವ ಉಳಿದು ಭ್ರಮೆಗೆ ಒಳಗಾಗುವ ಅಪಾಯ ಒದಗುತ್ತದೆ.

## ಹದಿ ವಯಸ್ಸು

ಸಹಜವಾದ ಮನಸ್ಸಿನ ಬೆಳವಣಿಗೆಯಲ್ಲಿ ಇದು ಹೀಗೆ ಕೆಲವುಕಾಲ ನಡೆದು ಬರುತ್ತದೆ. ಹದಿವಯಸ್ಸಿಗೆ ಬರುವ ಹೊತ್ತಿಗೆ ಈ ಕುತೂಹಲ ತಣಿದಿರುತ್ತದೆ. ಹದಿವಯಸ್ಸಿನವರಲ್ಲಿ ಕೆಲವು ದೈಹಿಕ ಬದಲಾವಣೆಗಳು ತೊಡಗುತ್ತವೆ. ಮೆದುಳಿನಲ್ಲಿ ಲೈಂಗಿಕ ಬೆಳವಣಿಗೆಗೆ ಸಹಾಯಕವಾಗುವ ಕೆಲವು ರಸಗ್ರಂಥಗಳು ಇರುತ್ತವೆ. ಈ ವಯಸ್ಸಿಗೆ ಅವು ತಮ್ಮ ಕೆಲಸವನ್ನು ಆರಂಭಿಸುತ್ತವೆ. ಮಗುವಿನ ಧ್ವನಿ ಬದಲಾಗಿ, ದೇಹದ ವಿವಿಧ ಅಂಗಗಳು ಹೆಚ್ಚು ಸ್ಪಷ್ಟವಾಗಿ ಆಕಾರ ತಾಳುತ್ತವೆ. ಹೆಣ್ಣುಮಗು ಮೈನೆರೆದು ಹೆಂಗಸಾಗುತ್ತಾಳೆ. ಗಂಡು ಮಗುವಿನಲ್ಲಿ ವೀರ್ಯವು ಕಳೆಯಲು ಆರಂಭವಾಗಿ ಗಂಡಸಾಗುತ್ತಾನೆ.

ಈ ಹಂತದ ಬೆಳವಣಿಗೆ ತೀವ್ರ ಗತಿಯಲ್ಲಿ ಇರುತ್ತದೆ. ನೋಡ ನೋಡುತ್ತಿರುವಂತೆ ಆಗುವ ಈ ಬದಲಾವಣೆಗಳಿಂದ ಮಕ್ಕಳು ಗಾಬರಿಯಾಗುವುದುಂಟು. ಆತಂಕ ಭಯಗಳಿಂದ ತತ್ತರಿಸುವುದುಂಟು. ಈ ಸಮಯದಲ್ಲಿ ಹಿರಿಯರು ಬಲು ಜಾಗರೂಕತೆಯಿಂದ ಅವರಿಗೆ ನೆರವಾಗಬೇಕು. ಅವರಲ್ಲಿ ಹೀಗೆ ಉಂಟಾಗುತ್ತಿರುವ ಬದಲಾವಣೆಗಳಲ್ಲಿ ಯಾವ ಅಸಹಜತೆಯೂ ಇಲ್ಲವೆಂಬ ಬಗ್ಗೆ ಅವರಲ್ಲಿ ವಿಶ್ವಾಸ ತುಂಬಬೇಕು. ಸರಿಯಾದ ಮಾಹಿತಿಯನ್ನು ಈ ಬಗ್ಗೆ ತಿಳಿಸುವ ಮೂಲಕ ಮಕ್ಕಳ ಸಹಜ ಬೆಳವಣಿಗೆಗೆ ನೆರವಾಗಬಹುದು. ಅವರ ಅನೇಕ ಗೊಂದಲಗಳನ್ನು ಸುಲಭವಾಗಿ ನಿವಾರಿಸಬಹುದು. ಹಾಗಿಲ್ಲದೆ, ಈ ಸಮಯದಲ್ಲಿ ಅವರಿಗೆ




**ಹುಡುಗಿ ಮೈನೆರೆಯುವುದು**

ಸರಿಯಾದ ರೀತಿಯ ನೈತಿಕ ಬೆಂಬಲ ದೊರೆಯಲಿಲ್ಲವೆನ್ನಿ. ಮಕ್ಕಳ ಗೊಂದಲಗಳು ಹೆಚ್ಚುತ್ತವೆ. ದಿಕ್ಕುತೋಚದೆ ಹೋಗುತ್ತದೆ. ಆಗ ಅಂತಹ ಮಕ್ಕಳ ನಡವಳಿಕೆಗಳು ವಿಪರೀತದವಾಗಿ, ವಿಕಾರದವಾಗಿ ಹಾಗೂ ತೀರಾ ಅಸಹಜವಾಗಿ ತೋರಿಬರುತ್ತವೆ.

ಹದಿವಯಸ್ಸಿಗೆ ಕಾಲಿಡುವ ಈ ದಿನಗಳಲ್ಲಿ ಉಂಟಾಗುವ ಈ ಸಮಸ್ಯೆಗಳು ಬಹುಮಟ್ಟಿಗೆ ಸಹಜವಾಗಿ ನಿವಾರಣೆಯಾಗುತ್ತವೆ. ಮಕ್ಕಳು ತಮ್ಮ ಹೊಸ ಬದುಕಿಗೆ ಹೊಂದಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಹಿರಿಯರು ಸ್ವಲ್ಪ ಮಟ್ಟಿನ ನೈತಿಕ ಬೆಂಬಲ ನೀಡಿದರೆ ಮಕ್ಕಳು ಹೆಚ್ಚು ಸುಲಭವಾಗಿ ಈ ಸಮಸ್ಯೆಯಿಂದ ಪಾರಾಗುತ್ತಾರೆ. ಆದರೆ ಕೆಲವು ಹಿರಿಯರು ತಮ್ಮ ಅಜ್ಞಾನದಿಂದಾಗಿ ಸಮಸ್ಯೆಯನ್ನು ಕಗ್ಗಂಟಾಗಿಸಿ ಬಿಡುತ್ತಾರೆ. ಉದಾಹರಣೆಗೆ, ಹೆಣ್ಣು ಮೈ ನೆರೆಯುವ ಕ್ರಿಯೆ ಒಂದು ಅಸಹ್ಯದ ಕರ್ಮ ಎಂಬ ಭಾವ ಬರಿಸುವುದು. ಹಿರಿಯರು ಇಂತಹ ವರ್ತನೆಗಳಿಂದ ಮಕ್ಕಳ ಗೊಂದಲಗಳನ್ನು ಹೆಚ್ಚಿಸಬಾರದು.

## ಮಕ್ಕಳ ಪರಿಪೂರ್ಣ ಆರೋಗ್ಯ

ಮಕ್ಕಳನ್ನು ಬೆಳಸುವುದೆಂದರೆ ಅವರಿಗೆ ಕಾಲಕಾಲಕ್ಕೆ ಬೇಕಾದ ಆಹಾರವನ್ನು ಒದಗಿಸಿ, ಸೆರಗಿನಲ್ಲಿ ಗಂಟುಹಾಕಿಕೊಂಡಷ್ಟಕ್ಕೆ ಮುಗಿಯುವುದಿಲ್ಲ. ಈ ಕ್ರಮಗಳಿಂದ ಮಕ್ಕಳ ದೇಹಕ್ಕೆ ರಕ್ಷಣೆ ದೊರೆಯುತ್ತದೆ. ಆದರೆ ಮಕ್ಕಳ ಮಾನಸಿಕ ಆರೋಗ್ಯವನ್ನು ಸಹ ನಾವು ಅಷ್ಟೇ ಎಚ್ಚರದಿಂದ ಕಾಪಾಡಬೇಕು. ನಾವು ಗಮನಿಸಬೇಕಾದ ಕೆಲವು ಸಂಗತಿಗಳಿವೆ.



ಸಂತೃಪ್ತ ಕುಟುಂಬ - ಮಗುವಿನ ಮನಸ್ಸಿಗೆ ನೆಮ್ಮದಿ

## ಭಾವನೆಗಳ ಭದ್ರತೆ

ಮಗುವಿಗೆ ತನ್ನವರ ಬಗ್ಗೆ, ತನ್ನ ಮನೆಯ ಬಗ್ಗೆ ಅಪಾರ ವಿಶ್ವಾಸ ಮೂಡುವ ವಾತಾವರಣವನ್ನು ಕಲ್ಪಿಸಬೇಕು. ಇದು ನನ್ನ ಮನೆ, ಇವರು ನಮ್ಮ ತಂದೆ ತಾಯಿ, ಹೊರಗಡೆ ಯಾವುದೇ ಕಷ್ಟಕ್ಕೆ ಸಿಲುಕಿದರೂ ನನ್ನ ಮನೆಯಲ್ಲಿ ನನಗೆ ರಕ್ಷಣೆ ದೊರೆಯುತ್ತದೆ. ತನ್ನವರ ಸಹಾಯದಿಂದ ನಾನು ಎಂತಹ ಕಷ್ಟವನ್ನೂ ಎದುರಿಸಬಲ್ಲೆ ಎಂಬ ಧೈರ್ಯವನ್ನು ಮಗುವಿನಲ್ಲಿ ನಾವು ಮೂಡಿಸಬೇಕು. ಮುಂದಿನ ಎಲ್ಲಾ ಹೊಂದಾಣಿಕೆಗಳಿಗೂ ಇದು ಅಗತ್ಯ.

## ಭಾವನೆಗಳ ಸ್ವಾತಂತ್ರ್ಯ

ಬೆಳೆಯುತ್ತಿರುವ ಮಗು ತನ್ನೆಲ್ಲಾ ಕೆಲಸಗಳನ್ನು ತಾನೇ ಮಾಡಬೇಕೆಂದು ಬಯಸುತ್ತದೆ. ತಾನೇ ಸ್ನಾನ ಮಾಡಬೇಕು, ಬಟ್ಟೆಯನ್ನು ಹಾಕಿಕೊಳ್ಳಬೇಕು, ಪಾದರಕ್ಷೆಯ ಲೇಸನ್ನು ಕಟ್ಟಿಕೊಳ್ಳಬೇಕು ಎಂದು ಬಯಸುತ್ತದೆ. ಯಾಕೆ, ಏನು, ಎತ್ತ ಎಂದು ತಾಯಿಯ ಆದೇಶಗಳನ್ನು ಪ್ರಶ್ನಿಸಲಾರಂಭಿಸುತ್ತದೆ. ಇದರಿಂದ ತಂದೆತಾಯಿಯರು ಬೇಜಾರು ಪಟ್ಟುಕೊಳ್ಳಬೇಕಾದ ಕಾರಣವಿಲ್ಲ. ಬದಲಾಗಿ ಈ ಪ್ರವೃತ್ತಿಯು ಬೆಳೆಯಲು ಅವಕಾಶ ಮಾಡಿಕೊಡಬೇಕು. ತನ್ನೆಲ್ಲಾ ಕೆಲಸವನ್ನು ಮಾಡಿಕೊಳ್ಳುವಂತೆ ಮಗುವನ್ನು ಪ್ರೋತ್ಸಾಹಿಸಬೇಕು. ಮಗು ವಸ್ತುವನ್ನು ಮುಟ್ಟಬೇಕು, ಮುರಿಯಬೇಕು, ಅದರಿಂದ ಅನುಭವ ಪಡೆಯಬೇಕು. ಮಗುವಿನ ಮುಂದಿನ ಬೆಳವಣಿಗೆಯಲ್ಲಿನ ಜಾಣತನ, ನಡವಳಿಕೆಯಲ್ಲಿನ ಚಾತುರ್ಯ ಮುಂತಾದ ಚಟುವಟಿಕೆಗಳಿಗೆ ಈ ವಿಚಾರ ಮುಖ್ಯ.

## ಮೆಚ್ಚುಗೆ, ಪ್ರೋತ್ಸಹ, ಚಾಲನಶಕ್ತಿ

ತನ್ನ ಚಟುವಟಿಕೆಗಳನ್ನು ತಂದೆ ತಾಯಂದಿರು, ಪೋಷಕರು ಮೆಚ್ಚಬೇಕು ಎಂದು ಮಗು ಬಯಸುತ್ತದೆ.

ತಂದೆ ಅಥವಾ ತಾಯಿ ಮನೆಗೆ ಬಂದ ಸಂದರ್ಭದಲ್ಲಿ ಮಗು ಪುಸ್ತಕದಲ್ಲಿ ಸಿಕ್ಕಾಪಟ್ಟೆ ಬಣ್ಣದ ಪೆನ್ಸಿಲಿನಲ್ಲಿ ಗೀಚಾಡಿ, ಅದನ್ನು ಉತ್ತಮ ಕಲಾಕೃತಿಯೆಂದು ಭಾವಿಸಿ ನಿಮ್ಮ ಮುಂದೆ ಪ್ರದರ್ಶಿಸಬಹುದು. ಆದರೆ ನಮ್ಮೆಲ್ಲರ ಸಾಮಾನ್ಯ ಪ್ರತಿಕ್ರಿಯೆ ಏನಿರುತ್ತದೆ? "ಹೀಗೆ ಗೀಚಿ ಪುಸ್ತಕ ಹಾಳು ಮಾಡಿದ್ದೇಕೆ?", "ನಿನಗೆ ಪುಸ್ತಕ ಎಲ್ಲಿ ಸಿಕ್ಕಿತು?", "ಪೆನ್ಸಿಲ್ ಎಲ್ಲಿ ಸಿಕ್ಕಿತು?"



ಮಗುವಿನ ಮನಸ್ಸನ್ನು ಅರ್ಥಮಾಡಿಕೊಳ್ಳಿ

ಇನ್ನೊಮ್ಮೆ ಹೀಗೆ ಮಾಡಿದರೆ ಒದೀತೀನಿ ನೋಡು ಎಂದು ವರ್ತಿಸುವುದರ ಬದಲು, "ನೋಡು ಮರಿ, ಈ ಚಿತ್ರ ತುಂಬಾ ಚೆನ್ನಾಗಿದೆ. ಆದರೆ ಇದಕ್ಕಿಂತಲೂ ಚೆನ್ನಾಗಿ ನೀನು ಬರೆಯಬಲ್ಲೆ ಎಂದು ನನಗೆ ಗೊತ್ತು. ಆದರೆ ಅದನ್ನು ನೀನು ಡ್ರಾಯಿಂಗ್ ಪುಸ್ತಕದಲ್ಲಿ ಬರೆಯತಕ್ಕದ್ದು. ಈ ರೀತಿ ಆಫೀಸಿನ ಪುಸ್ತಕದಲ್ಲಾಗಲೀ, ಕ್ಲಾಸಿನ ನೋಟ್ಸಿನಲ್ಲಾಗಲೀ ಬರೆಯುವುದು ತಪ್ಪು ಎಂದು ಹೇಳಿದರೆ ಮಗು ಖಂಡಿತ ಅದನ್ನು ಒಪ್ಪಿಕೊಳ್ಳುತ್ತದೆ.

## ಶಿಕ್ಷೆಯಿಲ್ಲದ ಸ್ವತಂತ್ರ ಪರಿಸರದ ಸೃಷ್ಟಿ

ಮಕ್ಕಳನ್ನು ಬೆಳೆಸುವಲ್ಲಿ ಶಿಕ್ಷೆಗೆ, ಏಟಿಗೆ, ಹೊಡೆತಕ್ಕೆ ಯಾವ ರೀತಿಯ ಮಹತ್ವವೂ ಇಲ್ಲ. ಆದರಿಂದ ಬಯಸಿದ ನಡವಳಿಕೆಗಿಂತ, ಮಗುವಿನ ಮನಸ್ಸಿನ ಬೆಳವಣಿಗೆಯ ಮೇಲೆ ದುಷ್ಟ ಪರಿಣಾಮಗಳಾಗುವ ಸಾಧ್ಯತೆಯುಂಟು. ಅನಾವಶ್ಯಕವಾಗಿ ಮಗುವಿನ ಮನಸ್ಸಿನಲ್ಲಿ ಮೂಡಿದ ಆತಂಕ, ಆಕ್ರೋಶವಾಗಿ ಮಾರ್ಪಟ್ಟು ಮುಂದೆ ಮನೋದೈಹಿಕ ವಿಕಲತೆಗಳಾಗುವ ಸಾಧ್ಯತೆಗಳುಂಟು.

ವಿಪರೀತ ಸಿಟ್ಟು ತುಂಬಿದ ಮಕ್ಕಳು ಯಾವ ರೀತಿಯಲ್ಲಿ ವರ್ತಿಸುತ್ತಾರೆಂಬುದಕ್ಕೆ ಕೆಳಕಂಡ ಉದಾಹರಣೆಗಳನ್ನು ಗಮನಿಸಿ.

"ನಿನಗೆ ಮುಂದೆ ಏನಾಗಬೇಕೆಂದು ಇಷ್ಟ ಮರಿ?", ಸುಮಾರು ಹತ್ತು ವರ್ಷದ ಹುಡುಗನನ್ನು ಕೇಳಿದೆ. "ನಾನು ಕತ್ತೆಯಾಗಲು ಬಯಸುತ್ತೇನೆ" ಉತ್ತರ.

"ಕಾರಣ?"

"ನನ್ನ ತಂದೆತಾಯಿಯರನ್ನು ಚೆನ್ನಾಗಿ ಒದೆಯಬಹುದು." ಕೋಪಕ್ಕೆ ಕಾರಣವಿಷ್ಟೇ. ಕಾಫಿಯ ಬದಲು ಬೋರ್ನ್‌ವೀಟವನ್ನು ಬೆಳಿಗ್ಗೆ ಹಾಗೂ ಸಾಯಂಕಾಲ ಕುಡಿಯಬೇಕೆಂಬುದು

ತಂದೆ ತಾಯಿಯ ಒತ್ತಾಯ. ಒಮ್ಮೆಯಾದರೂ ಸ್ವಲ್ಪ ಕಾಫಿಯನ್ನು ಕುಡಿಯಬೇಕೆಂಬ ಆಸೆ ಮಗುವಿನದು. ಇದರಲ್ಲಿ ತಪ್ಪು ಯಾರದ್ದು?

ಎರಡನೆಯ ಸಂದರ್ಭ. ರಜೆಗೆಂದು ಬಂದ ತನ್ನ ದೊಡ್ಡಪ್ಪನ ಮಗನೊಂದಿಗೆ, ನಮ್ಮ ಹುಡುಗ ಆಡುತ್ತಾ ಇದ್ದಾನೆ. ಮನೆಯಲ್ಲಿ ಆಟವಾಡಬಾರದು. ಓರಣವಾಗಿ ಜೋಡಿಸಿಟ್ಟ ಹಜಾರದ ಅಂದ ಚೆಂದಗಳು ಹಾಳಾಗುತ್ತವೆ. ರಸ್ತೆಯ ಮೇಲೆ ಆಡಬಾರದು. ಲಾರಿ, ಕಾರು, ಬಸ್ಸಿನ ಅಪಘಾತದ ಭೀತಿ. ಹೀಗಾಗಿ ಮನೆಯಲ್ಲಿ ಅಜ್ಜ, ಅಜ್ಜಿಯರು ಈ ಆಟವಾಡುತ್ತಿರುವ ಮಕ್ಕಳ ಮೇಲೆ ಅನಾವಶ್ಯಕವಾದ ಒತ್ತಡವನ್ನು ಹೇರಿದ್ದಾರೆ. ಈ ಸಂದರ್ಭದಲ್ಲಿ ಆಟವಾಡುತ್ತಿದ್ದ ಆರು ವರ್ಷದ ಹಿರಿಯ ಹುಡುಗ, ನಾಲ್ಕು ವರ್ಷದ ಕಿರಿಯನಿಗೆ ಸಮಾಧಾನ ಹೇಳುತ್ತಾನೆ. ಸುಮ್ಮನಿರು, ಅಳಬೇಡ. ಇನ್ನು ಸ್ವಲ್ಪ ದಿನದಲ್ಲಿ ಈ ಅಜ್ಜಾ, ಅಜ್ಜಿ ಸತ್ತು ಹೋಗುತ್ತಾರೆ. ಆಮೇಲೆ ನಾವು ಬೇಕಾದಷ್ಟು ಆಡೋಣ. ಎನ್ನಬೇಕೆ? ಮಗುವಿನ ಆಕ್ರೋಶ ಎಷ್ಟು ಶಕ್ತಿಶಾಲಿಯಾಗಿ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಗಮನಿಸಿ. ಆದರೆ ಮಗುವಿಗೆ ಸಾವು ನಿಶ್ಚಿತ ಎನ್ನುವ ಕಲ್ಪನೆಯಿಲ್ಲ, ಇವತ್ತು ಸತ್ತರೆ ನಾಳೆ ಮತ್ತೆ ಬರುತ್ತಾರೆ ಎನ್ನುವ ಮುಗ್ಧತೆ ಅವರಲ್ಲಿರುತ್ತದೆ.

ತಮ್ಮ ಮಕ್ಕಳು ಒಳ್ಳೆಯವರಾಗಬೇಕು, ಬುದ್ಧಿವಂತರಾಗಬೇಕು, ಬದುಕಿನಲ್ಲಿ ಯಶಸ್ವಿಯಾಗಬೇಕು ಎಂದು ಪ್ರತಿಯೊಬ್ಬ ಹೆತ್ತವರೂ ಆಸೆ ಪಡುತ್ತಾರೆ. ತಮ್ಮ ಮಿತಿ ಮೀರಿದ ಆಸೆಯನ್ನು ಮಕ್ಕಳ ಮೇಲೆ ಹೊರಿಸುತ್ತಾರೆ. ಜಗತ್ತಿನ ಎಲ್ಲಾ ಪ್ರತಿಭೆ, ಯಶಸ್ಸು ತನ್ನ ಮಗುವಿಗೆ ಸಿಗಬೇಕು ಎಂದು ಬಯಸುತ್ತಾರೆ. ಆದರೆ ತಮ್ಮ ಹಾಗೂ ಮಗುವಿನ ಇತಿಮಿತಿಗಳನ್ನು ತಿಳಿದುಕೊಳ್ಳುವ, ಮಗುವಿನ ಮೂಲಕವೇ ಹೊಸ ಜಗತ್ತನ್ನು ಕಾಣುವ ಪ್ರಯತ್ನ ಮಾಡುವವರು ಕಡಿಮೆ.

ಖ್ಯಾತ ಪರಿಸರ ವಿಜ್ಞಾನಿ ವಾಟ್ಸನ್ ಈ ರೀತಿ ಅಭಿಪ್ರಾಯ ಪಡುತ್ತಾರೆ.

ಪೂರ್ಣ ದಿನ ತುಂಬಿ, ಹೆರಿಗೆಯಾದ ನಂತರದಲ್ಲಿ ಹುಟ್ಟುವ ಆರೋಗ್ಯವಂತ ಮಗುವನ್ನು ನನ್ನ ಬಳಿ ಕೊಡಿ. ನಿಮ್ಮ ಕೋರಿಕೆಯಂತೆ ಪರಿಸರದ ಮೇಲಿನ ನಿಯಂತ್ರಣದಿಂದಲೇ, ನಿಮ್ಮ ಮಗುವನ್ನು ಅತಿಹೆಚ್ಚು ಬುದ್ಧಿಶಕ್ತಿಯ ಸ್ವಂತ ವಿಚಾರವುಳ್ಳವನನ್ನಾಗಿ ಮಾಡಲು ಸಾಧ್ಯ ಅಥವಾ ಬುದ್ಧಿಯಲ್ಲಿ ಬೆಳವಣಿಗೆ ಇಲ್ಲದವನನ್ನಾಗಿಯೂ ಮಾಡಬಲ್ಲೆ. ಮೊದಲೇ ನಿಶ್ಚಯಿಸಿದ

ಮಾದರಿಯಲ್ಲಿ ಮಗುವಿನ ಮನಸ್ಸಿನ ವಿಕಾಸ ಹಾಗೂ ವ್ಯಕ್ತಿತ್ವವನ್ನು ರೂಪಗೊಳಿಸಬಲ್ಲೆ ಎನ್ನುತ್ತಾರೆ.

## ಮಕ್ಕಳು ಹೀಗೇಕೆ ವರ್ತಿಸುತ್ತಾರೆ?

ಮಕ್ಕಳನ್ನು ಹದ್ದುಬಸ್ತಿನಲ್ಲಿಡಲು ಪೋಷಕರು ಹಲವಾರು ವಿಭಿನ್ನ ರೀತಿಯ ಪ್ರಯತ್ನಗಳನ್ನು ಮಾಡುವುದುಂಟು.



ಗುಮ್ಮ ಬಂತು ಗುಮ್ಮ - ಹೀಗೆ, ಹೇಳಬಾರದಮ್ಮಾ!

ಉದಾಹರಣೆಗೆ, "ಶ್ ನೋಡು, ನೀನು ಬೇಗನೆ ತಿನ್ನದಿದ್ದರೆ ಗುಮ್ಮ ಬರುತ್ತಾನೆ ನೋಡು, ನಿನ್ನನ್ನು ಎತ್ತಿಕೊಂಡು ಹೋಗುತ್ತಾನೆ."

"ಗುಮ್ಮ, ಅವನು ಯಾರಮ್ಮಾ, ಹೇಗಿದ್ದಾನೆ?"

"ದೊಡ್ಡ ಆಳು, ಕಪ್ಪುಬಣ್ಣ, ಕೋರೆ ಹಲ್ಲು, ಉದ್ದನೆಯ ಕೂದಲು."

"ಅಂದರೆ ಅಪ್ಪ, ಇದ್ದ ಹಾಗೆ ಇರ್ತಾನೇನಮ್ಮಾ

ಇನ್ನೊಂದು ಉದಾಹರಣೆ.

"ನೀನು ಇದೇ ರೀತಿಯಲ್ಲಿ ಹಟ ಮಾಡಿದರೆ ಪೋಲೀಸರನ್ನು ಕರೆಯಬೇಕಾಗುತ್ತದೆ, ಆತ ನಿನ್ನನ್ನು ಚೆನ್ನಾಗಿ ದಂಡಿಸುತ್ತಾನೆ."



"ಇಲ್ಲಮ್ಮಾ, ನನ್ನ ಜೊತೆ ಓದುವ ಹರೀಶನ ತಂದೆ ಪೋಲೀಸು, ಬಹಳ ಒಳ್ಳೆಯವರು, ಮೊನ್ನೆ ನನಗೆ ಚಾಕಲೇಟ್ ಕೊಡಿಸಿದರು, ಗೊತ್ತೇನು? ಹೇಳಿದರೆ ನೀನು ಹೊಡೆಯುತ್ತೀಯೆಂದು ನಾನು ನಿನಗೆ ತಿಳಿಸಲಿಲ್ಲ"

ಗಮನದಲ್ಲಿಡಿ. ಮಕ್ಕಳಲ್ಲಿ ಯಾವೊಂದು ಭಾವನೆಯನ್ನೂ ಮೂಡಿಸಬಹುದು. ಅದು ಸ್ವಲ್ಪ ಕಾಲವಷ್ಟೇ ಪ್ರಕಟವಾಗುವುದು. ಅವು ಬಹಳ ಕಾಲ ಉಳಿಯುವುದಿಲ್ಲ. ಒಳಗಿನ ಗ್ರಂಥಿಗಳ ಸ್ರವಿಸುವಿಕೆ ಇನ್ನೂ ಪ್ರಾರಂಭವಾಗದೇ ಇರುವುದು ಇದಕ್ಕೆ ಕಾರಣವಿರಬಹುದು. ಆದರೆ ಭಾವನೆಗಳು ಸ್ವಲ್ಪಕಾಲವೇ ಪ್ರಕಟವಾದರೂ, ಅವು ಅತಿಯಾಗಿ ಪ್ರಕಟವಾಗಿ, ಮನಸ್ಸಿನ ಸ್ಥಿತಿ ಮೇಲೇರಿ ವರ್ತನೆಯಲ್ಲಿನ ಹತೋಟಿ ತಪ್ಪಿ ಹೋಗಬಹುದು, ನಡವಳಿಕೆ ಅರ್ಥಹೀನವಾಗಬಹುದು, ಮಗು ತನ್ನ ಭಾವನೆಗಳಿಗೆ ಮೆಚ್ಚುಗೆ ಅಥವಾ ಹೀಯಾಳಿಕೆ ಹಿರಿಯರಿಂದ ದೊರಕುತ್ತದೆ ಎಂದು ಗಮನಿಸಿ, ಸರಿ ತಪ್ಪು ಕಲ್ಪನೆಯಿಂದ ತನ್ನ ಭಾವನೆಗಳನ್ನು ರೂಪಿಸಿಕೊಳ್ಳುತ್ತದೆ. ಉತ್ತಮ ಮಾದರಿ ನಡವಳಿಕೆ ಹಿರಿಯರಿಂದ ದೊರೆತಲ್ಲಿ, ಅನುಕರಣೆಯಿಂದ ಮಗು ಅದನ್ನೇ ಕಲಿತು ತನ್ನ ವ್ಯಕ್ತಿತ್ವದಲ್ಲಿ ಅದನ್ನು ಪ್ರಕಟಗೊಳಿಸುತ್ತದೆ.

**ಮಕ್ಕಳ ಭಾವನೆಗಳನ್ನು ಸರಿಯಾಗಿ ಬೆಳಿಸಲು ತಂದೆ, ತಾಯಿ, ಪೋಷಕರಿಗೆ ಕಿವಿಮಾತು**

೧. ಭಾವನೆಗಳ ಪ್ರಕಟಣೆಯಲ್ಲಿ ಅನುವಂಶಿಕತೆಯ ಪಾಲು ಕನಿಷ್ಠ, ಅನುಕರಣೆಯ ಪಾಲು ಹೆಚ್ಚು. ಆದ್ದರಿಂದ ಹಿರಿಯರು ಮಕ್ಕಳೆದುರು ಪ್ರಬುದ್ಧರಾಗಿ ವರ್ತಿಸತಕ್ಕದ್ದು.

೨. ಮಕ್ಕಳಲ್ಲಿ ಅನಾವಶ್ಯಕ ಭೀತಿಯನ್ನು ಹುಟ್ಟಿಸಬೇಡಿ. ಗುಮ್ಮ, ಭೂತ, ಪ್ರೇತ, ಪೋಲೀಸು, ಸ್ಕೂಲು ಮುಂತಾದ ಶಬ್ದಗಳನ್ನು ಮಗುವಿನಲ್ಲಿ ಭೀತಿ ಹುಟ್ಟಿಸುವುದಕ್ಕೆ ಬಳಸಬೇಡಿ.

೩. ಮಗುವನ್ನು ಅತೀ ಮುದ್ದು ಅಥವಾ ಅತೀ ಮೆಚ್ಚುಗೆಯ ಭಾವನೆಯಿಂದ ಬೆಳೆಸುವ ಕಲ್ಪನೆಯನ್ನು ತೆಗೆದು ಹಾಕಿ.

೪. ವರ್ತನೆಯನ್ನು ತಿದ್ದಲು ದೈಹಿಕ ಶಿಕ್ಷೆಯನ್ನು ಅಳವಡಿಸಿದರೆ ಅದು ಅನಾವಶ್ಯಕ ಗೊಂದಲವನ್ನು ಮಕ್ಕಳ ಮನಸ್ಸಿನಲ್ಲಿ ತಂದು ಹಾಕುತ್ತದೆ.

೫. ಮಕ್ಕಳನ್ನು ಶಾಲೆಗೆ ಕಳುಹಿಸಲು, ನನ್ನ ಪರಿಚಿತ ತಾಯಿಯೊಬ್ಬರು ಅಳವಡಿಸಿಕೊಂಡ ಕ್ರಮ ಬಹಳ ಅರ್ಥಪೂರ್ಣ. ಮಗು ಅನಾವಶ್ಯಕ ಹಠ ಮಾಡಿದಾಗ ಅಥವಾ ದುಷ್ಟ, ಕೆಟ್ಟ, ಪ್ರವೃತ್ತಿಯನ್ನು ತೋರಿಸಿದಾಗ, ಮಗುವಿಗೆ ಆಕೆ ನೀಡುತ್ತಿದ್ದ ಎಚ್ಚರಿಕೆ ಏನೆಂದರೆ- ನೋಡು, ನೀನು ಹೀಗೆಲ್ಲಾ ಮಾಡಿದರೆ ನಾನು ನಿನ್ನನ್ನು ಸ್ಕೂಲಿಗೆ ಕಳುಹಿಸುವುದಿಲ್ಲ, ತಿಳಿಯಿತೇನು? ಮಗು ಮುಂದೆ ಇಷ್ಟಪಟ್ಟು ಶಾಲೆಗೆ ಹಠ ಹಿಡಿದು ಹೋದರೆ ಅದರಲ್ಲಿ ಆಶ್ಚರ್ಯವೇನಿಲ್ಲಾ.

೬. ಯಾವ ಕಾರಣಕ್ಕೂ ಮಕ್ಕಳ ಮುಂದೆ ತಂದೆ ತಾಯಿ ಜಗಳ ಮಾಡತಕ್ಕದ್ದಲ್ಲ.

೭. ಬಿಡುವಿನಲ್ಲಿ ಆಟ, ಚಟುವಟಿಕೆಗಳಿಗೆ ಮಕ್ಕಳನ್ನು ಪ್ರೋತ್ಸಾಹಿಸಿ. ಇದರಿಂದ ಮಕ್ಕಳಿಗೆ ಗುಂಪಿನಲ್ಲಿ ಗುರುತಿಸಿಕೊಳ್ಳುವಿಕೆ, ಆರೋಗ್ಯಕರ ಸ್ಪರ್ಧಾತ್ಮಕ ಮನೋಭಾವ, ಗುಂಪು ನಿಷ್ಠೆ, ನಾಯಕನ ಅಧಿಕಾರಕ್ಕೆ ಮಣಿಯುವುದು ಹಾಗೂ ಸೋಲು ಗೆಲುವು ಸಮಾನ ಸ್ಥಿತಿಯಲ್ಲಿ ಅರ್ಥಮಾಡಿಕೊಳ್ಳುವ ಮನೋಭಾವ ಬರುತ್ತದೆ.

೮. ನಿಮ್ಮ ಸಾಮಾಜಿಕ ಅಧಿಕಾರ, ಅಂತಸ್ತು, ಆರ್ಥಿಕ ಮಟ್ಟಗಳನ್ನು - ಮಗುವಿನ ವ್ಯಕ್ತಿತ್ವದ ರೂಪರೇಷೆಗಳಿಂದ ದೂರವಿಡಿ.

೯. ತಂದೆ ತಾಯಿ, ಪೋಷಕರುಗಳು ಸರಿಯಾದ ಮಾದರಿ ಕೊಡದ ನಡವಳಿಕೆಯಿಂದ ಮಗುವಿನ ಮನಸ್ಸಿನ ಬೆಳವಣಿಗೆಯ ಮೇಲೆ ಕೆಟ್ಟ ಪರಿಣಾಮಗಳಾಗುವ ಸಾಧ್ಯತೆಯಿದೆ.

ತಂದೆ ಕಛೇರಿಯಿಂದ ದಣಿದು ಮನೆಗೆ ಬಂದಿರುತ್ತಾನೆ. ಮನೆಯಲ್ಲಿಯೋ ರಾದ್ಧಾಂತ. ತಾಯಿ ಮಗುವನ್ನು ದಂಡಿಸುತ್ತಾಳೆ. ಮಗು ತಾರಕ ಸ್ವರದಲ್ಲಿ ಅಳುತ್ತಿದೆ. ಕಾರಣ - ತನ್ನ ಏಕೈಕ ಮುದ್ದು ಐದು ವರ್ಷದ ಗಂಡು ಮಗು ಶಾಲೆಯಿಂದ ಮರಳಿ ಬರುವಾಗ, ತನ್ನ ಪಕ್ಕದ ಹುಡುಗನ ಚೀಲದಿಂದ ಪೆನ್ಸಿಲನ್ನು ಮನೆಗೆ ತಂದಿದೆ. ಅದು ಕಳುವಲ್ಲವೇ? ಇತರರು ಏನೆಂದು ತಿಳಿದಾರು - ಇದು ತಾಯಿಯ ಆಕ್ರೋಶಕ್ಕೆ ಕಾರಣ.

"ನೋಡಿದಿರೇನ್ರಿ? ನಿಮ್ಮ ಮಗ ಏನು ಮಾಡಿದ್ದಾನೆ? ಪೆನ್ಸಿಲನ್ನು ಸ್ಕೂಲಿನಿಂದ ಕದ್ದು ತಂದಿದ್ದಾನೆ. ಇವತ್ತು ಪೆನ್ಸಿಲ್ಲು, ನಾಳೆ ಮತ್ತೊಂದು. ಇವತ್ತು ಚೆನ್ನಾಗಿ ಬುದ್ಧಿ ಕಲಿಸುತ್ತೇನೆ


ನುಡಿದಂತೆ ನಡೆಯಬೇಕು

ನೋಡಿ". ಯಾವಾಗಲೂ ಹಾಗೇ. ಮಗು ಒಳ್ಳೆಯ ವರ್ತನೆ ತೋರಿಸಿದರೆ ಅದು ತನ್ನ ಮಗು. ಇಲ್ಲವಾದರೆ ನಿಮ್ಮ ಮಗು. ಇದೆಲ್ಲಾ ತಂದೆ ತಾಯಿಯರ ಸಾಮಾನ್ಯ ಪ್ರತಿಕ್ರಿಯೆ. ಇದಕ್ಕೆ ತಂದ ಏನು ಮಾಡುತ್ತಾನೆ ಗಮನಿಸಿ. ರೋಧಿಸುತ್ತಿರುವ ಮಗುವನ್ನು ಮೂಲೆಗೆ ಕರೆದೊಯ್ದು, ತೊಡೆಯ ಮೇಲೆ ಕೂರಿಸಿ, ಮುದ್ದಾಡಿ ಸಮಾಧಾನಪಡಿಸಿ, ನಂತರ ಬುದ್ಧಿ ಮಾತು ಹೇಳುತ್ತಾನೆ.

"ನೋಡು ಮರಿ, ಹಾಗೆಲ್ಲಾ ಇನ್ನೊಬ್ಬರ ವಸ್ತುವನ್ನು ಅವರಿಗೆ ತಿಳಿಸದೆ ತೆಗೆದುಕೊಳ್ಳುವುದು ತಪ್ಪು. ಅದು ಕಳ್ಳತನವಾಗುತ್ತದೆ. ಪೋಲೀಸರು ಶಿಕ್ಷಿಸುವ ಹಾಗೆ ಆಗುತ್ತದೆ. ಈಗ ನಿನಗೆ ಬೇಕಾದ್ದೇನು ಒಂದು ಪೆನ್ಸಿಲ್ಲು ತಾನೇ, ನನಗೆ ಹೇಳಿದರೆ ನಾನು ಅದನ್ನು ಆಫೀಸಿನಿಂದ ತಂದು ಕೊಡುತ್ತಿದ್ದೆನಲ್ಲಾ"

ಎಂತಹ ವಿಪರ್ಯಾಸ!? ಅಮಾಯಕ ಮಗು ಅರಿವಿಲ್ಲದೇ ಸಹಪಾಠಿಯ ಪೆನ್ಸಿಲನ್ನು ತಂದದ್ದು ಕಳ್ಳತನ. ಆದರೆ ವಿದ್ಯಾವಂತ ಪ್ರೌಢ ತಂದೆ ಆಫೀಸಿನಿಂದ ತರುವ ಸ್ಟೇಷನರಿ ಕಳ್ಳತನವಲ್ಲ. ಮಕ್ಕಳ ಮನೋವಿಕಾಸಕ್ಕೆ ತಮ್ಮ ಮಾದರಿ ಕೊಡುವ ಅಪರಿಪೂರ್ಣ ತಂದೆಯ ಒಂದು ಉದಾಹರಣೆ.

ತಾಯಂದಿರು ಇದಕ್ಕೆ ಹೊರತೇನಲ್ಲ. ಈ ಉದಾಹರಣೆಯನ್ನು ಗಮನಿಸಿ. ತರಗತಿಯಲ್ಲಿರುವ ಸುಮಾರು ಅರವತ್ತು ವಿದ್ಯಾರ್ಥಿಗಳಲ್ಲಿ ಎರಡನೇ ರ್‍ಯಾಂಕ್ ಬಂದ ಮಗು ಓಡೋಡಿ ತಾಯಿಯ ಬಳಿಗೆ ಬಂದು ಸಂತಸದಿಂದ ಹೇಳುತ್ತದೆ, "ಮಮ್ಮಿ ನೋಡು, ನಾನು ಸೆಕೆಂಡ್ ರ್‍ಯಾಂಕ್ ಬಂದಿದ್ದೇನೆ, ನನಗೇನು ಬಹುಮಾನ ಕೊಡುತ್ತೀಯಾ?" ತಾಯಿಯ ತಾಳ್ಮೆಯ ಉತ್ತರ "ಅದೇನು ಮಹಾ, ಪಕ್ಕದ ಮನೆಯ ಪ್ರಕಾಶನನ್ನು ನೋಡು, ಅವನು ಇಡೀ ಕ್ಲಾಸಿಗೆ ಫಸ್ಟ್ ಬಂದಿದ್ದಾನೆ ಗೊತ್ತೇನು?" ಪುರಸ್ಕಾರವನ್ನು ಬಯಸಿ ಬಂದ ಮಗುವಿಗೆ ಆಗಬಲ್ಲ ಮಾನಸಿಕ ಆಘಾತವನ್ನು ನೀವು ಊಹಿಸಬಹುದು.

## ಮಕ್ಕಳಲ್ಲಿ ಆಹಾರ ಸೇವನೆಯಲ್ಲಿ ಎದುರಿಸಬೇಕಾದ ಮಾನಸಿಕ ಸಮಸ್ಯೆಗಳಿಗೆ ಕಾರಣಗಳೇನು?

೧. ಪ್ರತಿಯೊಬ್ಬ ತಂದೆ, ತಾಯಿ, ಪೋಷಕರಿಗೆ ಉರುಟುರುಟಾಗಿ, ದಪ್ಪವಿರುವ ಮಕ್ಕಳು ಮಾತ್ರ ಆರೋಗ್ಯವಂತರು, ತೆಳುವಾದ ಶರೀರ ಅನಾರೋಗ್ಯದ ಚಿನ್ಹೆ ಎಂಬ ತಪ್ಪು

ಕಲ್ಪನೆ. ತೂಕ ಹೆಚ್ಚಿದಷ್ಟು ಆರೋಗ್ಯ ಒಳಿತು ಎನ್ನುವ ತಪ್ಪು ಭ್ರಮೆ ಇದೆ. ಇದು ತೊಲಗಬೇಕು.

೨. ಮಗು ಹೊತ್ತಿಗೆ ಸರಿಯಾಗಿ, ಪ್ರತಿ ಬಾರಿಯೂ ನಿರ್ದಿಷ್ಟ ಪ್ರಮಾಣವನ್ನೇ ಸಮರ್ಪಕವಾಗಿ ಊಟ ಮಾಡಿಯೇ ತೀರಬೇಕು ಎನ್ನುವ ಬಯಕೆ ಅನಗತ್ಯ.

೩. ಊಟ ಮಾಡುವ ಸಂದರ್ಭದಲ್ಲಿ ಮಗುವಿನ ಆಹಾರ ಸೇವನೆಯ ಗತಿಯ ಬಗ್ಗೆ ಮಗುವಿನ ಕಡೆ ಗಮನಿಸುತ್ತಾ, ಆಗಾಗ ಮಾರ್ಗದರ್ಶನವೀಯುತ್ತಾ ಆ ಮಗುವನ್ನು ಸರ್ವರ ಗಮನದ ಕೇಂದ್ರಬಿಂದುವನ್ನಾಗಿ ಮಾಡುವುದರಿಂದ, ಮಗು ಆತಂಕಪೂರಿತವಾಗುತ್ತದೆ. ಆತ್ಮ ವಿಶ್ವಾಸದ ಕೊರತೆ ಮೂಡುತ್ತದೆ. ಹಿತಕರವಾಗಿರಬೇಕಾದ ವಾತಾವರಣ ಗೊಂದಲಮಯವನ್ನುಂಟು ಮಾಡುತ್ತದೆ.

೪. ಅವಶ್ಯಕತೆಗಿಂತಲೂ ಹೆಚ್ಚು ಗಮನವನ್ನು ಈ ಸಮಯದಲ್ಲಿ ಮಕ್ಕಳ ಮೇಲೆ ಹರಿಸುವುದರಿಂದ, ಈ ವರ್ತನೆಯೇ ಭದ್ರತೆಯ ಬುನಾದಿಯಾಗಿ, ಇದನ್ನು ಉಳಿಸಿಕೊಳ್ಳಲೆಂದೇ ಮಗು ತನ್ನ ತಪ್ಪು ವರ್ತನೆಯನ್ನು ಮುಂದುವರೆಸಿಕೊಂಡು ಹೋಗಬಹುದು.

೫. ಮಗು ಹೆಚ್ಚು ಹೆಚ್ಚು ಆಹಾರವನ್ನು ಬೇಗಬೇಗನೆ ಸೇವಿಸಲೆಂದು ಹಲವಾರು ಆಸೆ ಆಮಿಷಗಳನ್ನು ತೋರಿಸುವುದು.

೬. ಹೆಚ್ಚು ತಿನ್ನಿಸಬೇಕೆಂಬ ಹಂಬಲದಿಂದ, ಇತರೇ ಮಕ್ಕಳೊಂದಿಗೆ ಅಹಿತಕರವಾದ ಹೋಲಿಕೆಯನ್ನು ಎತ್ತಿ ತೋರಿಸಿ ಆಡಿಕೊಳ್ಳುವುದು, ವ್ಯಂಗ್ಯೋಕ್ತಿ, ಕುಯುಕ್ತಿಯಿಂದ ಮಕ್ಕಳನ್ನು ತದುಕಿ ತಿನ್ನಿಸುವುದು.

೭. ನೆಗಡಿ, ಕೆಮ್ಮು, ಶೀತ, ಜ್ವರ ಮುಂತಾದ ದೈಹಿಕ ಬೇನೆಯಾದಾಗ, ದೀರ್ಘ ಕಾಲದ ಜಡ್ಡಿನ ನಂತರದ ಪೀಚಲು, ಮಾನಸಿಕ ಉದ್ವೇಗ, ಬೇಜಾರು, ಆಕ್ರಂದನವಿದ್ದಾಗ ಹಸಿವು ಕಡಿಮೆಯಾಗುವುದು ಸ್ವಾಭಾವಿಕ. ಆಗ ತಿನ್ನಲು ಒತ್ತಾಯ ಅನಾವಶ್ಯಕ.

೮. ಮಗು ಬೆಳೆದು ದೊಡ್ಡದಾದ ಮೇಲೆಯೂ ಸಹ ಸ್ವತಂತ್ರವಾಗಿ ಎಲ್ಲಾ ಕಾರ್ಯಗಳನ್ನು ಮಾಡಲು ಬಯಸಿದಾಗ, ತಾಯಂದಿರು ತಾವೇ ಸ್ವತಃ

ಉಣಿಸುವುದು, ಊಟ ಮಾಡಬೇಕಾದ ಸಮಯದಲ್ಲಿ ಪಾಲಿಸಬೇಕಾದ ಕನಿಷ್ಟ ಶಿಸ್ತಿನ ಬಗ್ಗೆ ಸುದೀರ್ಘ ಪ್ರವಚನವನ್ನೇ ಮಾಡುವುದು.

೯. ಮಗು ತನ್ನ ಹೆಚ್ಚಿನ ನಡವಳಿಕೆಯನ್ನು ಅನುಕರಣೆಯಿಂದ ಕಲಿಯುತ್ತದೆ. ಅದರಂತೆ ಊಟದ ಸಮಯದಲ್ಲಿ ಯಾರಾದರೂ ತಮ್ಮ ಅಭಿರುಚಿಗಳ ಬಗ್ಗೆ, ಇಷ್ಟ ಅನಿಷ್ಟಗಳ ಬಗ್ಗೆ ಮಾತನಾಡಿದಾಗ, ಆಹಾರದಲ್ಲಿನ ತನ್ನ ಆದ್ಯತೆಗಳನ್ನು ಸೂಚಿಸಿದಾಗ, ಅಥವಾ ಬಡಿಸಿದ ಪದಾರ್ಥ ತರಕಾರಿ, ಅದನ್ನು ತಯಾರಿಸಿದ ವಿಧಾನಗಳ ಬಗ್ಗೆ ಮಗುವಿನ ಮುಂದೆ ಕಟುವಾಗಿ ಟೀಕಿಸಿದಾಗ, ಮಗು ಅದನ್ನು ಗಮನಿಸುತ್ತದೆ. ತಾಯಿಯೋ, ಅಕ್ಕನೋ ಶರೀರ ಸೌಂದರ್ಯಕ್ಕೆಂದು 'ಡಯಟಿಂಗ್' ಬಗ್ಗೆ ಚರ್ಚೆ ನಡಿಸಿದಾಗ ಮಗು ಆ ಚರ್ಚೆಯ ಹೆಚ್ಚಿನ ಭಾಗವನ್ನು ಅನುಷ್ಠಾನಕ್ಕೆ ತರಲು ಬಯಸುತ್ತದೆ.

೧೦. ಮಗುವಿನ ಆಹಾರ ಸೇವನೆ, ತಿನ್ನುವ ಹವ್ಯಾಸಗಳ ಬಗ್ಗೆ ಇತರರೊಂದಿಗೆ ಚರ್ಚಿಸುವುದರಿಂದ ಮಗು, ತಾನು ತನ್ನ ಈ ಹವ್ಯಾಸದಿಂದ ಬಹಳ ಪ್ರಮುಖನಾಗುತ್ತಿದ್ದೇನೆ. ಚರ್ಚೆಯ ವಿಷಯವಾಗುತ್ತಿದ್ದೇನೆ ಎಂದು ಕಲ್ಪಿಸಿ, ಈ ಪ್ರವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತದೆ.

೧೧. ಮಾನಸಿಕ ಆಘಾತಕಾರಿ ಸನ್ನಿವೇಶಗಳು, ತಂದೆ-ತಾಯಿಯ ಕಲಹ, ಮನೆಯಲ್ಲಿ ಅಹಿತಕಾರಿ ವಾತಾವರಣವನ್ನು ಕಲ್ಪಿಸಿ, ಮಗುವಿನಲ್ಲಿ ಅಭದ್ರತೆಯನ್ನು ಮೂಡಿಸುತ್ತದೆ. ಮನೆಯಲ್ಲಿ ಹೊಸ ಕಂದಮ್ಮ ಬಂದಾಗಲೂ ತನ್ನ ಬಗ್ಗೆ ಗಮನ ಕಡಿಮೆಯಾದೀತೆಂಬ ಭೀತಿ.

೧೨. ಪ್ರತಿ ತಿನಿಸು, ತರಕಾರಿಯನ್ನು ಬೇಡವೆನ್ನದೆ ಬಲಾತ್ಕಾರವಾಗಿ ತಿನ್ನಲು ಕಲಿಯಬೇಕು ಎನ್ನುವ ಶಿಸ್ತಿನ ನಿಲುವು ಹಲವಾರು ತಾಯಂದಿರಲ್ಲಿದೆ. ಇದರಿಂದ ವಿರುದ್ಧ ಪರಿಣಾಮ ಸಿಗುವುದು ಖಂಡಿತ. ಉದಾಹರಣೆಗೆ ಮಗು ಮೂಲಂಗಿಯನ್ನು ಇಷ್ಟ ಪಡದಿದ್ದಾಗ, ಅದನ್ನು ತಿನ್ನಲೇಬೇಕೆಂದು ತಾಯಿ ಹಟ ಮಾಡಿದರೆ ಮಗುವಿಗೆ ಅದರ ಬಗ್ಗೆ ಜಿಗುಪ್ಸೆ, ಅಸಹ್ಯ ಮೂಡುವ ಸಾಧ್ಯತೆಯುಂಟು.

೧೩. ವಯಸ್ಸು ಬೆಳೆಯುತ್ತಿದ್ದಂತೆ ಶಾಲೆಯ ಪರಿಸರ, ಸಹಪಾಠಿಗಳ ಕಿರುಕುಳ, ಕಲಹ, ಹೊರೆಯ ಹೋಂವರ್ಕ್, ಶಿಸ್ತಿನ ಶಿಕ್ಷಿಸುವ ಉಪಾಧ್ಯಾಯರು, ಮನಸ್ಸಿನ

ಬೇಡಿಕೆಯನ್ನು ಪೂರೈಸದ ಪಠ್ಯಕ್ರಮ - ಇವೆಲ್ಲಾ ಮಗುವಿನ ಮನಸ್ಸಿನ ಮೇಲೆ ಪರಿಣಾಮ ಬೀರುವ ಸಾಧ್ಯತೆಯುಂಟು.

೧೪. ಹೆಣ್ಣು ಮಕ್ಕಳಲ್ಲಿ, ಆಳವಾಗಿ ಬೇರೂರಿದ ಮನೋಲೈಂಗಿಕ ವೇದನೆಗಳು ಇದಕ್ಕೆ ಕಾರಣವಾಗಬಹುದು. ಊಟ ಮಾಡಿದ ನಂತರ ತುಂಬಿದ ಹೊಟ್ಟೆ, ಮುಂಬರುವ ಗರ್ಭಧಾರಣೆಯ ಪ್ರತೀಕ - ಅದರ ಬಗೆಗಿನ ಭೀತಿ ಹಸಿವನ್ನು ತೊಡೆದುಹಾಕಬಲ್ಲದು.

೧೫. ಮಗುವಿನಲ್ಲಿ ಬುದ್ಧಿಮಾಂದ್ಯತೆಯಿದ್ದಾಗ, ತನ್ನ ಹಸಿವು, ಅದರ ಪೂರೈಕೆಯ ಅಗತ್ಯ, ಹೊಟ್ಟೆ ತುಂಬುವಿಕೆಯ ಕಲ್ಪನೆಯಿಲ್ಲದಿದ್ದಾಗ - ಅದು ತಿನ್ನುತ್ತಲೇ ಇರಬಹುದು, ಜೀರ್ಣ ಭಾದೆಗಳಿಗೊಳಗಾಗಬಹುದು. ಅಲ್ಲದೆ ಮಣ್ಣು, ಸೀಸದ ಕಡ್ಡಿ ಮುಂತಾದವನ್ನೇ ಬಾಯಲ್ಲಿ ಹಾಕಿಕೊಳ್ಳಬಹುದು.

೧೬. ಮೂಢನಂಬಿಕೆಗಳು - ಗಟ್ಟಿ ಪದಾರ್ಥಗಳನ್ನು ಬಾಯಲ್ಲಿ ಹಾಕಿ ಅಗಿದರೆ, ಹಲ್ಲುಗಳು ಬಲವಾಗಿ ಬೆಳೆಯುತ್ತವೆ, ವಸಡು ಬಲಿಯುತ್ತದೆ ಎನ್ನುವುದು.

## ಶಾಲೆಯ ಪಾಠ ಪ್ರವಚನ

ಮಗುವಿಗೆ ಸಾಮಾನ್ಯ ಬುದ್ಧಿಮಾಂದ್ಯತೆಯಿದೆಯೋ ಅಥವಾ ಕೇವಲ ಶಿಕ್ಷಣದಲ್ಲಿ ಹಿಂದುಳಿಯುವಿಕೆಯೋ ಎಂಬ ಅಂಶದ ಬಗ್ಗೆ ಒಳನೋಟ ಮುಖ್ಯ.

ಮಂಕುತನಕ್ಕೂ, ಹಿಂದುಳಿಯುವಿಕೆಗೂ ಇರುವ ಮುಖ್ಯ ವ್ಯತ್ಯಾಸವೆಂದರೆ ಮಗುವಿಗೆ ಇರುವ ಸ್ವಸಾಮರ್ಥ್ಯಕ್ಕಿಂತ ಆತನ ಸಾಧನೆ ಕಡಿಮೆಯಾದಲ್ಲಿ ಅದನ್ನು ಹಿಂದುಳಿಯುವಿಕೆ ಅಥವಾ ಹಿಂಜರಿತ ಎನ್ನಬಹುದು. ಬದಲಾಗಿ ಆತನ ಸಾಧನೆ ಆತನ ಮಂಕುಬುದ್ಧಿಯಿಂದ ಪ್ರೇರಿತವಾಗಿದ್ದು, ಯಾವ ಕಾರಣದಿಂದಲೂ ಅದನ್ನು ಉತ್ತಮಗೊಳಿಸಲಾಗದಿದ್ದಲ್ಲಿ ಆ ಮಗುವನ್ನು ಮಂಕು ಮಗು ಎಂಬುದಾಗಿ ಪರಿಗಣಿಸಬಹುದು. ಮಂಕುತನ ಹಾಗೂ ಶೈಕ್ಷಣಿಕ ಹಿಂಜರಿತ ಎರಡನ್ನೂ ಒಂದೇ ಮಗುವಿನಲ್ಲೂ ಸಹ ಕಾಣಲು ಸಾಧ್ಯವಿದೆ. ಹಾಗಾದರೆ ಮಗು ಶೈಕ್ಷಣಿಕ ಅಧ್ಯಯನದಲ್ಲಿ ಹಿಂದುಳಿಯಲು ಕಾರಣಗಳೇನು?

೧. ದೈಹಿಕ ರೋಗ ರುಜಿನಗಳು

ರೋಗರುಜಿನಗಳಿಂದ ಹೆಚ್ಚಿನ ಕಾಲ ಶಾಲೆಯನ್ನು ತಪ್ಪಿಸಿಕೊಳ್ಳುವ ಸಂದರ್ಭಗಳಲ್ಲಿ, ಪಾಠ ಪ್ರವಚನದ ಕ್ರಮಬದ್ಧತೆ ತಪ್ಪಿ ಹೋಗುವ ಸಾಧ್ಯತೆಗಳುಂಟು. ಅಲ್ಲದೆ ಮೆದುಳಿನ ಕೆಲವು ಭಾಗಗಳಲ್ಲಿ ಆಘಾತ ಅಥವಾ ನ್ಯೂನತೆಗಳಿದ್ದಲ್ಲಿ ಸಹ ಮಗುವಿಗೆ ಶಿಕ್ಷಣ ಭಾರವೆನಿಸಬಹುದು.

೨. ಮಾನಸಿಕ ಅಭದ್ರತೆ

ಸಣ್ಣ ಮಕ್ಕಳನ್ನು ಅತ್ಯುತ್ತಮ ಶಿಕ್ಷಣಕ್ಕೋಸ್ಕರ ದೂರ ದೂರದ ಊರಿನಲ್ಲಿರುವ ವಸತಿ ಶಾಲೆಯಲ್ಲಿಡುವುದು ಮಗುವಿನ ಶಿಸ್ತು, ಸಂಯಮ, ಅರಿವನ್ನು ಹೆಚ್ಚಿಸುತ್ತದೆ ಎಂಬುದು ಹಲವು ತಂದೆ ತಾಯಂದಿರ ನಿಲುವು. ಇದಕ್ಕೆ ಮಗುವಿನ ವ್ಯಕ್ತಿತ್ವದ ಆಯಾಮವೂ ಪೂರಕವಾಗಿರಬೇಕು. ಶಿಕ್ಷಕರು ಶಿಸ್ತುಸಂಹಿತೆಯನ್ನು ಕಠಿಣವಾಗಿ ಅಳವಡಿಸಿದಲ್ಲಿ, ಇದರಿಂದಾಗುವ ದುಷ್ಪರಿಣಾಮಗಳೇ ಹೆಚ್ಚು. ಇತ್ತೀಚಿನ ನನ್ನ ದೆಹಲಿ ಭೇಟಿಯಲ್ಲಿ ಗಮನಿಸಿದ್ದು ಭಯೋತ್ಪಾದಕರಿಂದ ತಪ್ಪಿಸಲು, ರಾಜಕೀಯ ಗಣ್ಯರ ಮಕ್ಕಳು ತರಗತಿಯಲ್ಲಿ ಪಾಠ ಪ್ರವಚನವನ್ನು ಅಧ್ಯಯಿಸುತ್ತಿದ್ದಾಗ ತರಗತಿಯ ಸುತ್ತಲೂ ಸ್ಟೆನ್‌ಗನ್‌ದಾರಿ, ಕಮ್ಯಾಂಡೋ ದಳದ ಸಿಬ್ಬಂದಿಯ ಪಹರೆ. ಊಹಿಸಿ, ಆ ವಾತಾವರಣದಲ್ಲಿ ಶಿಕ್ಷಣ ಹೇಗೆ ಸಾಧ್ಯ ಎಂಬುದು.

ಪರಿಹಾರ ಕ್ರಮ

೧. ಎಲ್ಲಾ ಮಕ್ಕಳುಗಳ ಬುದ್ಧಿಮತ್ತೆಯೂ ಒಂದೇ ಪ್ರಮಾಣದಲ್ಲಿ ಇರುವುದಿಲ್ಲವೆಂಬ ಅಂಶವನ್ನು ಮನಗಾಣಬೇಕು.

೨. ಪೂರ್ವ ನಿಗದಿತ, ನಿರ್ದಿಷ್ಟ ರೂಪರೇಖೆಯಂತೆ ಮಗುವಿನ ಅಭ್ಯಾಸವನ್ನು ರೂಪಿಸಬೇಡಿ. ಮಗುವಿನ ಮನಸ್ಸು ಕಾಂಕ್ರಿಟ್ ಕಟ್ಟಡವಲ್ಲ, ಬದಲಾಗಿ ಸಂವೇದನಾ ಶೀಲತೆ ಮತ್ತು ಸೂಕ್ಷ್ಮ ಮನೋಭಾವದಿಂದ ನಿರ್ಮಿತವಾಗಿರುತ್ತದೆ.

೩. ಮಗುವಿನ ಎದುರು ಅನಾವಶ್ಯಕವಾಗಿ ಶಾಲೆಯನ್ನು, ಉಪಾಧ್ಯಾಯರನ್ನು ಟೀಕಿಸಬೇಡಿ.

೪. ಶಿಕ್ಷಣ ಮಾಧ್ಯಮದ ಬಗ್ಗೆ, ಶಾಲೆಯ ಆಯ್ಕೆಯ ಬಗ್ಗೆ ತಂದೆ, ತಾಯಿ ಪೋಷಕರಲ್ಲಿ ಮುಂಚೆಯೇ ಒಪ್ಪಂದವಿರಲಿ.

೫. ಮಗು ಚೆನ್ನಾಗಿ ಕಲಿಯಬೇಕು, ಹೆಚ್ಚು ಅಂಕ ಗಳಿಸಬೇಕು. ತರಗತಿಯಲ್ಲಿ ಮೊದಲಿಗನಾಗಿರಬೇಕೆಂಬ ಇಚ್ಛೆ ತಪ್ಪಲ್ಲ. ಆದರೆ ಅದನ್ನು ಅನುಷ್ಠಾನಕ್ಕೆ ತರುವ ರೀತಿಯಲ್ಲಿ, ಮಗುವಿನ ವಿಚಾರಕ್ಕೂ ಆದ್ಯತೆ ಕೊಡಿ.

## ತಂದೆ, ತಾಯಿ, ಪೋಷಕರ ಮನೋಭಾವಗಳು

ಮಗುವಿನ ವಿದ್ಯಾಭ್ಯಾಸವನ್ನು ಒಂದು ಪೂರ್ವ ನಿಗದಿತ ಮಾದರಿಯಲ್ಲಿ ನಡೆಸಿಯೇ ತೀರಬೇಕೆಂಬ ಛಲ ಹಲವು ತಂದೆ ತಾಯಂದಿರದ್ದು. ತಮ್ಮ ಮಕ್ಕಳು ಬೆಳಿಗ್ಗೆ ಏಳುವ ಸಮಯದಿಂದ ಹಿಡಿದು ಆತನು ಅಭ್ಯಸಿಸಬೇಕಾದ ರೀತಿ, ಸಮಯ, ವಿನ್ಯಾಸ ಪ್ರತಿಯೊಂದನ್ನು ಮಗುವಿನ ಮೇಲೆ ಹೇರುವ ಪ್ರವೃತ್ತಿ ಅವರದ್ದು. ತಾನು ಡಾಕ್ಟರಾಗಲು ಬಯಸಿದ್ದೆ, ಸಾಧ್ಯವಾಗಲಿಲ್ಲ. ತನ್ನ ಮಗನನ್ನು ಖಂಡಿತಾ ಡಾಕ್ಟರನ್ನಾಗಿ ಮಾಡಿಯೇ ತೀರುತ್ತೇನೆ ಎಂದು ಹಠ ಹಿಡಿದು ಮಗುವಿನ ಮೇಲೆ ಬೇಡಿಕೆಯನ್ನು ಹೆಚ್ಚಿಸಿ, ಓದನ್ನು ದ್ವೇಷಿಸುವಂತೆ ಮಾಡುವ ತಂದೆ ತಾಯಂದಿರಿದ್ದಾರೆ. ಮಕ್ಕಳ ಓದಿನ ಬಗ್ಗೆ ಏನೊಂದೂ ಆಸಕ್ತಿಯನ್ನು ತೋರಿಸದೆ ಅಸಡ್ಡೆ ಮಾಡುವುದು, ಆತನ ಶಾಲೆಯನ್ನು, ಉಪಾಧ್ಯಾಯರನ್ನು ನಿಕೃಷ್ಟವಾಗಿ ಟೀಕಿಸುವುದು, ಆಧುನಿಕ ಪಠ್ಯಕ್ರಮವನ್ನು ಜರಿಯುವುದು ಮುಂತಾದ ಚಟುವಟಿಕೆಗಳು ಮಗುವಿಗೆ ಶಾಲೆಯ ಬಗ್ಗೆ, ಶಿಕ್ಷಕರ ಬಗ್ಗೆ ಇರುವ ಗೌರವವನ್ನು ಕಡಿಮೆ ಮಾಡಿಸುವುದರಿಂದ ಮುಂದೆ ಶಾಲೆಯ ಶಿಸ್ತಿಗೆ, ಉಪಾಧ್ಯಾಯರ ಅಧಿಕಾರಕ್ಕೆ ಜಗ್ಗದ ಮಗುವಾಗಬಹುದು. ಶಾಲಾ ಪುಸ್ತಕಗಳು ಸಮಯಕ್ಕೆ ಸರಿಯಾಗಿ ಕೊಳ್ಳಲು ಸಿಕ್ಕದೆ ಇರುವುದು, ಸ್ಕೂಲನ್ನು ಮತ್ತೆ ಮತ್ತೆ ಬದಲಾಯಿಸುವುದು, ಶಿಕ್ಷಣ ಮಾಧ್ಯಮದ ಬದಲಾವಣೆಗಳು, ಮಗುವಿನ ಶಿಕ್ಷಣ ಕ್ರಮವನ್ನು ಪ್ರಭಾವಿಸಬಲ್ಲದು. ಕಠಿಣ ಶಿಕ್ಷೆ ಇತರರೊಂದಿಗೆ ಅನಪೇಕ್ಷಿತ ಹೋಲಿಕೆ, ಪ್ರತಿಯೊಂದರಲ್ಲೂ ತಪ್ಪು ಹುಡುಕುವ ಹವ್ಯಾಸ ಅಧ್ಯಯನದಲ್ಲಿ ಹಿಂಜರಿಕೆಯನ್ನು ಮೂಡಿಸಬಲ್ಲದು.

## ೪. ಶಾಲೆ ಹಾಗೂ ಅವುಗಳ ಕಾರ್ಯ ಪ್ರವೃತ್ತಿ

ನೆನಪಿನಲ್ಲಿಡಿ. ಮಗು ಶಾಲೆಗೆ ಮೊದಲ ಬಾರಿಗೆ ಹೋಗುವುದು ಅತ್ಯಂತ ಆತಂಕ ಪೂರಿತ ಸನ್ನಿವೇಶ. ಮನೆಯಲ್ಲಿ ಮುಕ್ತ ವಾತಾವರಣದಲ್ಲಿ ಬೆಳೆದ, ತಂದೆ ತಾಯಿಯ ಪ್ರೀತಿಯ ಮಡಿಲಲ್ಲಿ ಬೆಳೆದ ಮಗು ವಾತಾವರಣದ ಅಧಿಕಾರಕ್ಕೆ ಒಪ್ಪಬೇಕಾದ ಸನ್ನಿವೇಶ ಮನಸ್ಸಿಗೆ ಕಿರಿಕಿರಿ ಮಾಡಬಲ್ಲದು. ಮಗು ಹೊಸ ಹೊಂದಾಣಿಕೆಯನ್ನು ಮಾಡಬೇಕಾಗುತ್ತದೆ. ಸುಭದ್ರ ಮನೆಯ ವಾತಾವರಣದಿಂದ ಬಂದ ಮಗು ಶಾಲೆಯಲ್ಲಿ ಸುಲಭವಾಗಿ ಹೊಂದಿಕೊಳ್ಳುವ ಸಾಧ್ಯತೆಯಿದೆ.

ಆರೋಗ್ಯ ಮನೋಭಾವದ ಶಿಕ್ಷಕರೂ ಸುಸ್ಥಿತಿಯ ಶಾಲಾ ಕಟ್ಟಡಗಳು ಸಹ ಮಗುವು ಶಾಲೆಗೆ ಬೇಗ ಹೊಂದಿಕೊಳ್ಳಲು ಸಹಾಯಕವಾಗುತ್ತದೆ.

## ೫. ಅರ್ಥರಹಿತ ಅನರ್ಥಕಾರಿ ಪಠ್ಯಕ್ರಮ

ಕೆಳಕಂಡ ಉದಾಹರಣೆಯನ್ನು ಗಮನಿಸಿ, ನಮಗೆ ಗಣಿತದ ಪಾಠದಲ್ಲಿದ್ದ ವಿಪರ್ಯಾಸದ ಒಂದು ಸಮಸ್ಯೆ:- ನಲ್ಲಿ "ಎ"ಯನ್ನು ತಿರುಗಿಸಿದರೆ ತೊಟ್ಟಿ 45 ನಿಮಿಷದಲ್ಲಿ ತುಂಬುತ್ತದೆ. ನಲ್ಲಿ "ಬಿ"ಯನ್ನು ತಿರುಗಿಸಿದಲ್ಲಿ ತೊಟ್ಟಿ ಖಾಲಿಯಾಗುತ್ತದೆ. ನಲ್ಲಿ "ಎ" ಮತ್ತು "ಬಿ" ಯನ್ನು ಒಟ್ಟಿಗೆ ತಿರುಗಿಸಿದಲ್ಲಿ ತೊಟ್ಟಿ ಎಷ್ಟು ಬೇಗ ತುಂಬುತ್ತದೆ? ನೀವೆಲ್ಲಾ ಬಾಲ್ಯದಲ್ಲಿ ಈ ಪ್ರಶ್ನೆಯನ್ನು ಎದುರಿಸಿದ್ದೀರಿ. ಇದರಲ್ಲಿನ ನಿಜವಾದ ಸಮಸ್ಯೆಯೆಂದರೆ ಪ್ರಶ್ನಕಾರನಿಗೆ ತೊಟ್ಟಿ ತುಂಬುವ ಆಸಕ್ತಿಯೋ ಅಥವಾ ತೊಟ್ಟಿ ಖಾಲಿ ಮಾಡುವುದರಲ್ಲಿ ಆಸಕ್ತಿಯೋ? ಇದೇ ರೀತಿಯ ವಿಷಯವನ್ನು ತಿಳಿಸಲು ಪ್ರಶ್ನೆಯನ್ನು ಊಹೆಗೆ ನಿಲುಕುವಂತೆ ಅರ್ಥಪೂರ್ಣ ಮಾಡಲು ಸಾಧ್ಯ. ವಿಷಯಗಳನ್ನು ಆಕರ್ಷಕವಾಗಿ ಮುದ್ರಿಸಲೂ ಸಾಧ್ಯ.

೬. ವಯಸ್ಕರ ಹಾಗೇ ಮಕ್ಕಳಿಗೂ, ತಮ್ಮದೇ ಆದ ಬಯಕೆ, ಒದಿನ ಬಗೆಗಿನ ಕಲನೆ, ಮನೋಭಾವ ಹಾಗೂ ಬೇಡಿಕೆಗಳಿರುತ್ತವೆ. ಅದನ್ನು ಪೂರೈಸಿ.

೭. ಶಿಸ್ತು, ಶಿಕ್ಷಣದ ಅಧ್ಯಯನದ ಔಚಿತ್ಯದ ಬಗ್ಗೆ, ಅದರಿಂದ ದೊರಕುವ ಪುರಸ್ಕಾರದ ಬಗ್ಗೆ ಸುಲಭ ಉದಾಹರಣೆಯಿಂದ ವಿವರಿಸಿ.

೮. ಅಂಗವಿಕಲತೆ ಹಾಗೂ ಕೆಲವು ದೀರ್ಘಕಾಲದ ದೈಹಿಕ ರೋಗಗಳಿಂದ ಮಕ್ಕಳಲ್ಲಿ ಆತ್ಮವಿಶ್ವಾಸದ ಕೊರತೆಯಿರುತ್ತದೆ. ಇವರನ್ನು ಪ್ರೋತ್ಸಾಹಿಸಿ ಸರಿಪಡಿಸಲು ಪ್ರಯತ್ನಿಸಿ.

೯. ಕಠಿಣ ಶಿಸ್ತು, ದೈಹಿಕ ದಂಡನೆ, ವಿಕೃತ ರೂಪ ಶಿಕ್ಷೆಗಳು, ನಾಗರ ಬೆತ್ತದಿಂದ ಹೊಡೆಯುವುದು, ಒಂಟಿ ಕಾಲಿನ ಮೇಲೆ ನಿಲ್ಲುವುದು, ಬೆಂಚಿನ ಮೇಲೆ ನಿಲ್ಲಿಸುವಂತಹ ಹಲವಾರು ದಂಡನಾ ವಿಧಾನಗಳಿಂದ ಅನಪೇಕ್ಷಿತ ಪರಿಣಾಮಗಳೇ ಹೆಚ್ಚೆಂದು ಶಿಕ್ಷಕರು ಮನನ ಮಾಡಿಕೊಳ್ಳಬೇಕು.

೧೦. ಹೆಚ್ಚಿನ "ಹೋಂವರ್ಕ್" ಕೊಟ್ಟ ಶಾಲೆ ಮಾದರಿ ಶಾಲೆ ಎನ್ನುವ ಭ್ರಮೆ ಹೋಗಲಿ.

೧೧. ಸಾಕಷ್ಟು ಮನರಂಜನೆ, ಆಕರ್ಷಕ ಆಟಗಳು,ಶ್ರಮದಾನ, ಪ್ರತಿಭೆಗೆ ಅವಕಾಶ ನೀಡುವುದರಿಂದ ಮಗುವಿನ ವ್ಯಕ್ತಿತ್ವದ ವಿಕಸನವೂ ಆಗಬಲ್ಲದು.

೧೨. ಪಠ್ಯಕ್ರಮಗಳನ್ನು ಶಿಕ್ಷಣತಜ್ಞರೂ, ಮನೋವಿಜ್ಞಾನಿಗಳೂ, ಸಾಮಾಜಿಕ ಶಾಸ್ತ್ರಜ್ಞರೂ, ಶಿಕ್ಷಕರೂ ಸೇರಿ ನಿಜಜೀವನಕ್ಕೂ, ಭವಿಷ್ಯದ ನಿರ್ಮಾಣಕ್ಕೂ ಪೂರಕವಾಗುವಂತೆ ಅರ್ಥಪೂರ್ಣವಾಗಿ ರೂಪಿಸುವುದು ಅಗತ್ಯ.

೧೩. ವಿಶಾಲವಾದ ಕೊಠಡಿಗಳು, ಸಮರ್ಪಕ ಶಿಕ್ಷಣ ಸಾಧನಗಳು, ಪ್ರಬುದ್ಧ ಶಿಕ್ಷಕರು ವಿಶಾಲ ಆಟದ ಬಯಲು ಆದರ್ಶ ಶಾಲೆಯ ಕನಿಷ್ಟ ಬೇಡಿಕೆಗಳು.

೧೪. ಶಿಕ್ಷಣದಲ್ಲಿ ಪಾಠಗಳು ರಾಷ್ಟ್ರ, ಸಂಸ್ಕೃತಿ, ಕಲೆ, ಕೈಗಾರಿಕೆ ಅವುಗಳೊಂದಿಗೆ ಗುರುತಿಸಿಕೊಳ್ಳುವಂತೆ ರೂಪಿಸಿದರೆ ಭದ್ರ ಭವಿಷ್ಯ ವ್ಯಕ್ತಿತ್ವದ ನಿರ್ಮಾಣ, ಅದರಿಂದ ರಾಷ್ಟ್ರ ನಿರ್ಮಾಣ ಸಾಧ್ಯ.

## ಮಕ್ಕಳ ಮನಸ್ಸಿನ ಬೆಳವಣಿಗೆಯ ಮೇಲೆ ತಂದೆ, ತಾಯಿ, ಪೋಷಕರ ಪ್ರಭಾವ

ಮಕ್ಕಳ ಮನಸ್ಸು ಹಾಗೂ ವ್ಯಕ್ತಿತ್ವಗಳು ತಂದೆ, ತಾಯಿ, ಪೋಷಕರು ಅವರನ್ನು ಬೆಳೆಸುವ ಕ್ರಮ ಸುತ್ತಮುತ್ತಲಿನ ಪರಿಸರ, ಹಾಗೂ ವಂಶಪಾರಂಪರ್ಯದ ವಿಶೇಷಗಳ ಮೇಲೆ

ನಿರ್ಧಾರವಾಗುತ್ತದೆ. ತಂದೆ, ತಾಯಿ, ಮಕ್ಕಳನ್ನು ಬೆಳೆಸುವ ಕ್ರಮಗಳನ್ನು ಈ ಕೆಳಕಂಡಂತೆ ವರ್ಗೀಕರಿಸಬಹುದು.

## ೧. ಅತೀ ರಕ್ಷಣಾತ್ಮಕ ತಂದೆ ತಾಯಿ

ಇವರುಗಳು ತಮ್ಮ ಮಕ್ಕಳನ್ನು ತುಂಬಾ ಮುದ್ದು ಮಾಡುವುದಲ್ಲದೆ ಮಗು ಮಾಡಬೇಕಾದ ಎಲ್ಲಾ ಚಟುವಟಿಕೆಗಳನ್ನೂ ತಾವುಗಳೇ ಮಾಡಲು ಇಷ್ಟ ಪಡುತ್ತಾರೆ. ಯಾವಾಗಲೂ ಮಗು ತನ್ನ ಬಳಿ ಇರಬೇಕು. ಮಗುವಿಗೆ ತಿನ್ನಿಸುವುದು, ಸ್ನಾನ ಮಾಡಿಸುವುದು, ಆಟವಾಡಿಸುವುದು ಎಲ್ಲವನ್ನೂ ತಾವೇ ಮಾಡಬೇಕೆಂದು ಬಯಸುತ್ತಾರೆ. ಮಗು ಹೊರಗಡೆ ಹೋದರೆ ಅದು ಅಪಘಾತಕ್ಕೆ ಈಡಾಗಬಹುದು. ಕೆಟ್ಟ ಹುಡುಗರ ಸಹವಾಸಕ್ಕೆ ಬೀಳಬಹುದು ಎಂದು ಮಗುವನ್ನು ಅತೀ ರಕ್ಷಣಾ ಮನೋಭಾವದಿಂದ ಕಾಪಾಡುತ್ತಾರೆ. ಮಗುವನ್ನು ಯಾವಾಗಲೂ ತಮ್ಮೊಂದಿಗೆ ಮಲಗಿಸಿಕೊಳ್ಳುವುದು ಇತರರ ಎದುರಿಗೆ ಮಗುವನ್ನು ತುಂಬಾ ಹೊಗಳುವುದು, ಮಗು ಇನ್ನೊಂದು ಮಗುವಿನೊಂದಿಗೆ ಜಗಳವಾಡುವಾಗ ಅನಾವಶ್ಯಕವಾಗಿ ಮಧ್ಯ ಪ್ರವೇಶಿಸುವುದು, ಈ ವರ್ಗದ ತಂದೆ ತಾಯಂದಿರ ಲಕ್ಷಣ. ಇದರಿಂದ ಮಗುವಿನ ಮನಸ್ಸಿನ ಬೆಳವಣಿಗೆಯ ಮೇಲೆ ಕೆಟ್ಟ ಪರಿಣಾಮಗಳಾಗುವ ಸಾಧ್ಯತೆಗಳುಂಟು. ಮಗುವಿಗೆ ಎಲ್ಲಾ ಸೌಲಭ್ಯಗಳು ಮನೆಯಲ್ಲಿ ಸಿಕ್ಕುವಾಗ ಹೊರಗಿನ ಪ್ರಪಂಚದೊಂದಿಗೆ ಸಂಪರ್ಕ ಇಟ್ಟುಕೊಳ್ಳಲು ಮಗು ಪ್ರಯತ್ನಿಸುವುದೇ ಇಲ್ಲ. 'ಮಗು' ಏಕಾಂಗಿಯಾಗಿರುತ್ತದೆ. ಹಗಲುಗನಸುಗಳನ್ನು ಕಾಣುತ್ತದೆ. ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಯಾವ ಸಾಧನೆಗಾಗಿಯೂ ಪ್ರಯತ್ನಿಸುವುದಿಲ್ಲ. ಮಂಕಾಗಿ, ಅಂತರ್ಮುಖಿಯಾಗಿ ಬೆಳೆಯುವುದರಿಂದ ಮುಂದೆ ಇತರರೊಂದಿಗೆ ಹೊಂದಾಣಿಕೆಯ ಸಮಸ್ಯೆಗಳು ಉಂಟಾಗುತ್ತವೆ.

## ೨. ಅತೀ ತಿರಸ್ಕಾರ ಮನೋಭಾವದ ತಂದೆ ತಾಯಿ

ಸಂಸಾರದ ಕಷ್ಟ ಕಾರ್ಪಣ್ಯಗಳು, ಹಣದ ವ್ಯವಸ್ಥೆ ಸರಿಯಾಗಿ ಇಲ್ಲದಿರುವಿಕೆ, ದೊಡ್ಡ ಕುಟುಂಬ, ಮನೆತುಂಬ ಮಕ್ಕಳು ಇಂತಹ ವಾತಾವರಣದಲ್ಲಿರುವ ತಂದೆ ತಾಯಂದಿರು ಮಕ್ಕಳನ್ನು ಗಮನಿಸದೆ ತಿರಸ್ಕಾರ ಮನೋಭಾವದಿಂದ ಕಾಣುವ ಸಾಧ್ಯತೆಗಳುಂಟು. ತನ್ನ ಮಕ್ಕಳಲ್ಲಿ ಮಗುವಿನ ಕ್ರಮಸಂಖ್ಯೆ ಎಷ್ಟು? ಅಥವಾ ತನ್ನ ಮಗು ಎಷ್ಟನೇ ತರಗತಿಯಲ್ಲಿ ಓದುತ್ತಿದೆ ಎನ್ನುವ ಕನಿಷ್ಟ ವಿಷಯಗಳನ್ನು ತಿಳಿಯದ ತಂದೆ ತಾಯಂದಿರಿದ್ದಾರೆ. ಮಗುವಿನ ಚಟುವಟಿಕೆಯಲ್ಲಿ ಆಸಕ್ತಿ ತೋರಿಸದ ತಂದೆ ತಾಯಂದಿರಿಂದ ಮಗುವಿನ ಮನಸ್ಸಿನ ಬೆಳವಣಿಗೆ ಕುಂಠಿತವಾಗಿ ಈ ಮಕ್ಕಳು ಮಂಕಾಗುತ್ತಾರೆ. ಬೇಸರ ಪಟ್ಟುಕೊಂಡು ಒಳಗಿಂದೊಳಗೆ ಕೊರಗುತ್ತಾರೆ. ಅತೀ ಶ್ರೀಮಂತ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಬಾಲ್ಯದಲ್ಲಿಯೇ ದೂರದಲ್ಲಿರುವ ವಸತಿ ಶಾಲೆಯಲ್ಲಿ ಸೇರಿಸಿದಾಗ ಆ ಮಕ್ಕಳ ಮನಸ್ಸಿನ ಬೆಳವಣಿಗೆಯ ಮೇಲೂ ಈ ಮೇಲ್ಕಂಡಂತಹ ಕೆಟ್ಟ ಪರಿಣಾಮಗಳಾಗುವ ಸಾಧ್ಯತೆಗಳುಂಟು.

## ೩. ಅತೀ ಶಿಕ್ಷಿಸುವ ತಂದೆ ತಾಯಿಗಳು

ಈ ವರ್ಗಕ್ಕೆ ಮದ್ಯ ವ್ಯಸನಿ ತಂದೆಯೋ ಅಥವಾ ಮಮತೆ, ವಿಶ್ವಾಸ, ಪ್ರೀತಿ ಇಲ್ಲದ ತಾಯಿಯೋ ಸೇರುತ್ತಾರೆ. ಚಿಕ್ಕ ಪುಟ್ಟ ತಪ್ಪುಗಳಿಗೂ ಮಕ್ಕಳನ್ನು ದಂಡನೆಗೆ, ಶಿಕ್ಷೆಗೆ ಒಳಪಡಿಸುವ ಕ್ರಮ, ಮಕ್ಕಳ ಮೇಲೆ ಶಿಸ್ತನ್ನು ಹೇರುವ ಕಾರಣಕ್ಕಾಗಿಯೂ ಈ ದಂಡನೆ ನಡೆಯುತ್ತದೆ. ದಯವಿಟ್ಟು ನೆನಪಿಡಿ. ಮಕ್ಕಳ ಮನಸ್ಸಿನ ಬೆಳವಣಿಗೆಯಲ್ಲಿ ದಂಡನೆಗೆ ಯಾವ ಪಾತ್ರವೂ ಇಲ್ಲ. ಇದು ಶಿಸ್ತಿನ ಬದಲು ಮಕ್ಕಳ ಮನಸ್ಸಿಗೆ ಕಷ್ಟವನ್ನುಂಟು ಮಾಡುತ್ತದೆ. ಈ ಮಕ್ಕಳು ಮುಂದೆ ಸಮಾಜಘಾತುಕ ವ್ಯಕ್ತಿತ್ವಗಳಾಗಿ, ಸುಳ್ಳು ಹೇಳುವುದು, ಶಾಲೆ ತಪ್ಪಿಸುವುದು, ಕದಿಯುವುದು ಮುಂತಾದ ಕೆಟ್ಟ ಕೆಲಸದಲ್ಲಿ ತೊಡಗುತ್ತಾರೆ.

ಆದ್ದರಿಂದ ತಂದೆ ತಾಯಂದಿರು ಯಾವುದನ್ನು ಅತಿಯಾಗಿ ಮಾಡದೆ ಮಕ್ಕಳನ್ನು ಸಹಜವಾಗಿ ಬೆಳೆಸಿ, ಅವರಿಗೆ ಬೇಕಾದ ಪ್ರೀತಿ, ವಿಶ್ವಾಸ, ಮಮತೆ, ಅನುಕಂಪ ಮತ್ತು ಶಿಸ್ತನ್ನು ಸಮಪ್ರಮಾಣದಲ್ಲಿ ನೀಡಿದರೆ ಮಕ್ಕಳ ಮನಸ್ಸು ಆರೋಗ್ಯಕರವಾಗಿ ಬೆಳೆಯಲು ಸಾಧ್ಯ.





ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು